ಬಿಡಿಮುತ್ತು : ೧೫

# ನಡೆದು ಬಂದ ದಾರಿ

ಎಂ. ಗೋಪಾಲಕೃಷ್ಣ ಅಡಿಗ

ಉಷಾ ಸಾಹಿತ್ಯ ಮಾಲೆ
ಮೈಸೂರು

# ಸಹೃದಯರಿಗೆ

ಇಂದು ನನ್ನ ಈ ಮೂರನೆಯ ಕವನಸಂಕಲನ, ‘ ನಡೆದು ಬಂದ ದಾರಿ ’ ಪ್ರಕಟವಾಗುತ್ತಿದೆ. ಸಂಕಲನಕ್ಕೆ ಈ ಹೆಸರು ಕೊಡಲು ಎರಡು ಕಾರಣ. ಏನಾದರೂ ಒಂದು ಹೆಸರು ಕೊಡಲೇ ಬೇಕಾದುದರಿಂದ ಸಂಕಲನದ ಮೊದಲನೆಯ ಪದ್ಯದ ಹೆಸರನ್ನೇ ಕೊಟ್ಟು ಕೈ ತೊಳೆದುಕೊಂಡದ್ದು–ಒಂದು ; ಈವರೆಗೆ ನಾನು ಕವನರಚನೆ ಮಾಡಿದ ರೀತಿಯಲ್ಲಿ ಬಹುಶಃ ಇನ್ನು ಮುಂದೆ ಮಾಡಲಾರೆ ಎಂಬುದರ ಸೂಚನೆ ಇನ್ನೊಂದು.

(ಆಧುನಿಕ ಕನ್ನಡ ಕಾವ್ಯದಲ್ಲಿ ಒಂದು ಘಟ್ಟ ಕಳೆದು ಈಗ ಇನ್ನೊಂದು ಘಟ್ಟ ಮೊದಲಾಗುತ್ತಿದೆ) ಕಾವ್ಯರೂಪದಲ್ಲಿ ಬದಲಾವಣೆ ಆಗಬೇಕಾದ ಕಾಲ ಆಗಲೇ ಬಂದುಬಿಟ್ಟಿದೆ. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬರುವ ತನಕ ಇದ್ದ ವಾತಾವರಣ ಈಗ ಸಮೂಲ ಪರಿವರ್ತನಗೊಂಡಿದೆ. ಸ್ವಾತಂತ್ರ್ಯ ಸಂಗ್ರಾಮದ ಉತ್ಸಾಹ ಉದ್ವೇಗ ಆದರ್ಶಪರವಶತೆಯ ಹಾರಾಟ ಮುಗಿದು ಈಗ ನಮ್ಮ ಮನಸ್ಸು ಮತ್ತೆ ನೆಲಕ್ಕಿಳಿದಿದೆ. ಮೋಡವಾಗಿ ಮೇಲೇರಿದ ಮನಸ್ಸು ಮಳೆಯಾಗಿ ಬಿದ್ದು ಮತ್ತೆ ಹಳ್ಳಕೊಳ್ಳಗಳಲ್ಲಿ ತುಂಬಿಕೊಂಡಿದೆ. ತಳದಲ್ಲಿ ಕೂತಿದ್ದ ಕೊಳೆ ಕಸರಾಡಿಯೆಲ್ಲ ಈಗ ಮೇಲೆದ್ದು ಬಂದು ಕನ್ನಡಿಯಂಥ ನೀರು ಕಲಕಿದೆ. ಹೊಸ ಆದರ್ಶಕ್ಕಾಗಿ ಹೊಸ ಕಣಸಿಗಾಗಿ ದೇಶದ ಮನಸ್ಸು ಹಸಿದು ಕಾಯುತ್ತಿದೆ. ಇಂಥ ವಾತಾವರಣ ಸುತ್ತುಮುತ್ತಲೂ ಇರುವಾಗ, ಜೀವನಾವಲಂಬಿಯಾದ ಕಾವ್ಯವೂ ಪರಿವರ್ತನೆಗೊಳ್ಳುವುದು ಸಹಜ. ಗಾಂಧಿ ಯುಗದಲ್ಲಿ ಬರೆದ ರೀತಿಯಲ್ಲೇ ಇನ್ನೂ ಬರೆದರೆ ಬಹುಶಃ ಅದು ಕಾವ್ಯಾಭಾಸವಾಗುತ್ತದೆ, ಇಲ್ಲವೇ ಸತ್ವಹೀನ ಕಾವ್ಯವಾಗುತ್ತದೆ; ಚರ್ವಿತ ಚರ್ವಣವಾಗುತ್ತದೆ. ಆಗ ಭಾವವನ್ನು ಕೊಲ್ಲುವ ಮಾತು ಭೇತಾಳದಂತೆ ನಮ್ಮ ಬೆನ್ನು ಹತ್ತಿ, ಸಮಾಜದ ಬೆಳವಣಿಗೆಗೆ ಮಾರಕವಾಗುತ್ತದೆಂದು ನನಗೆ ತೋರುತ್ತದೆ. ಆದಕಾರಣ ಈಗ ಕಾಣುತ್ತಿರುವ ಹೊಸ ಮನೋಧರ್ಮವನ್ನು ವ್ಯಕ್ತಪಡಿಸಲು ಹೊಸ ನಾಲಗೆ, ಹೊಸ ನುಡಿಕಟ್ಟು ರೂಪುಗೊಳ್ಳಬೇಕಾಗಿದೆ. ಈಗ ಬರೆಯುತ್ತಿರುವ ಕವಿಗಳೆಲ್ಲ ಈ ಕುರಿತು ಯೋಚನೆ ಮಾಡಬೇಕಾದ್ದು ಅನಿವಾರ್ಯ. ಹೊಸಹೊಸತಾಗಿ

ಬರೆಯುತ್ತಿರುವ ತರುಣ ಕವಿಗಳಂತೂ ಈ ಸಮಸ್ಯೆಯನ್ನು ಎದುರಿಸದೆ ಗತ್ಯಂತರವಿಲ್ಲ. ನಮ್ಮ ಹಿರಿಯ ಕವಿಗಳ ದಾರಿಯಲ್ಲಿ ನಡೆಯುವುದರಿಂದಲೂ ಅಷ್ಟು ಕವಿತೆ ಬಂದೀತು; ಆದರೆ ಅದಕ್ಕೆ ಜೀವಕೊಡುವ ಸತ್ವವಾಗಲೀ, ಹೊಸ ಸಮಾಜದ ವಾಣಿಯಾಗುವ ಸಾಮರ್ಥ್ಯವಾಗಲೀ ಖಂಡಿತ ಬರಲಾರದು.

ನಮ್ಮ ಹಿರಿಯ ಕವಿಗಳು ಆಧುನಿಕ ಕಾವ್ಯಕ್ಕೆ ತಕ್ಕ ಭಾಷೆಯನ್ನು ಸಿದ್ಧಗೊಳಿಸಿ ಅದರಲ್ಲಿ ಅಮೋಘವಾದ ಕೆಲಸವನ್ನು ಮಾಡಿದ್ದಾರೆ. ಆದರೆ ಅದೇ ರೀತಿ ಅಮೋಘವಾದ ಕೆಲಸವನ್ನು ಹೊಸ ತಲೆಮಾರಿನವರೂ ಮಾಡಿ ತೋರಿಸಬೇಕಾಗಿದೆ. ಪ್ರತಿ ತಲೆಮಾರಿನಲ್ಲೂ ಕವಿ ತನ್ನದೇ ಆದ ಒಂದು ಹೊಸ ಭಾಷೆಯನ್ನು ರೂಪಿಸಿಕೊಳ್ಳದೆ ಉತ್ತಮ ಅಭಿವ್ಯಕ್ತಿಯನ್ನು ಪಡೆಯಲಾರ. ಭಾಷೆ ಹೀಗೆ ಪುನಃ ಪುನಃ ಸೃಷ್ಟಿಯಾದಾಗಲೇ ಅದು ಭಾವವಿಚಾರಗಳನ್ನು ಯಥಾವತ್ತಾಗಿ ಪ್ರತಿಬಿಂಬಿಸಲು ಸಮರ್ಥವಾಗುತ್ತದೆ. ಗತಕಾಲದ ಭಾಷೆ ಭಾವವನ್ನು ಕೊಲ್ಲುತ್ತದೆ; ಮನಸ್ಸನ್ನು ಮಂಕಾಗಿಸುತ್ತದೆ. ಅರ್ಥಕ್ಕಿಂತ ಶಬ್ದಗಳ ಹಾರಾಟವೇ ಹೆಚ್ಚಿ ಅರ್ಥ ಮರೆಯಾಗುತ್ತದೆ; ಸಂಕೇತ ಮೂಲರೂಪವನ್ನು ಮರಸುತ್ತವೆ; ಉತ್ಸವಮೂರ್ತಿ ತಾನೇ ಮೂಲವಿಗ್ರಹವೆಂದು ವಿಜೃಂಭಿಸುತ್ತದೆ. ಆದಕಾರಣವೇ ಹೊಸ ಜೀವನ ಭಾವನೆಗಳಿಗೆ ತಕ್ಕ ರೀತಿ ರೂಪುಗೊಳ್ಳಬೇಕಾದ ಕಾಲ ಈಗ ಸಾಹಿತಿಗಳನ್ನು ಎದುರಿಸಿ ನಿಂತಿದೆ.

ಹತ್ತೊಂಬತ್ತನೆಯ ಶತಮಾನದ ಆಂಗ್ಲ ಕವಿಗಳಾದ ವರ್ಡ್ಸ್‌ವರ್ಥ್, ಶೆಲ್ಲಿ, ಕೀಟ್ಸ್ ಮುಂತಾದ ರೊಮಾಂಟಿಕ್ ಕವಿಗಳಿಂದ ಪ್ರೇರಿತವಾದ ನಮ್ಮ ಆಧುನಿಕ ಕನ್ನಡ ಕಾವ್ಯ ಆ ಸಂಪ್ರದಾಯದಲ್ಲಿ ತಾನು ಮಾಡಬಹುದಾದಷ್ಟು ಕೆಲಸವನ್ನು ಮಾಡಿ ಮುಗಿಸಿದೆ. ಆ ಸಂಪ್ರದಾಯದ ಸತ್ವ ಈಗ ತೀರಿದೆ, ಅದಕ್ಕೆ ಅವನತಿ ಬಂದಿದೆ. ಅದರ ದೋಷಗಳೆಲ್ಲ ಈಗ ಎದ್ದು ಕಾಣಿಸುತ್ತಿವೆ. ನೆಲದ ಮೇಲೆ ಕಾಲೂರಿ ನಿಂತೇ ನಕ್ಷತ್ರವನ್ನು ತುಡುಕುತ್ತಿದ್ದುದು ಈಗ ನೆಲ ಬಿಟ್ಟು ಮೇಲೇರಿ ವೇದಾಂತದ ಮಂಜಿನಲ್ಲಿ ಮರೆಯಾಗಿ ಹೋಗುತ್ತಿದೆ. ಶಬ್ದಗಳು ಅರ್ಥದ ಸ್ಥಾನವನ್ನು ಆಕ್ರಮಿಸುತ್ತಿವೆ. ಪ್ರತಿಯೊಂದು ಭಾವವೂ ಅನುಭವವೂ ಅತಿ ಸರಳವಾಗಿ ಸತ್ಯದಿಂದ ದೂರದೂರ ಹೋಗುತ್ತಿವೆ. ಇಂಥ ಕಾಲದಲ್ಲಿ ಕಾವ್ಯಕ್ಕೆ ಮತ್ತೆ ವಾಸ್ತವದ ರಕ್ತದಾನ ನಡೆಯಬೇಕು. ಕಾವ್ಯದಲ್ಲಿ

ಮತ್ತೆ ಮಣ್ಣಿನ ವಾಸನೆ ಹೊಡೆಯಬೇಕು. ಈ ಜಗತ್ತನ್ನು ಬಿಟ್ಟು ಕಾವ್ಯ ಬದುಕಲಾರದು ಎಂಬುದನ್ನು ಮತ್ತೆ ಕವಿಗಳು ಅರಿಯಬೇಕಾಗುತ್ತದೆ. ನಿಜವಾದ ಕವಿ ಈ ಮಾತನ್ನು ಎಂದೂ ಮರೆಯುವುದಿಲ್ಲ, ಮರೆಯಲಾರ. ಆದರೆ ಕೇವಲ ವಾಸ್ತವವಾದುದು, ಇಂದ್ರಿಯಗಮ್ಯವಾದುದು ಮಾತ್ರವೇ ಕಾವ್ಯದ ವಸ್ತುವಾಗಲಾರದು. ಈ ಜಗತ್ತಿನಲ್ಲಿ ನಮ್ಮ ಸುತ್ತ ಕಾಣುವ ವಸ್ತುಗಳು ಎಷ್ಟು ನಿಜವೋ ಆ ವಸ್ತುಗಳ ವಿಷಯದಲ್ಲಿ ನಮ್ಮ ಮನಸ್ಸಿನಲ್ಲಿ ಹುಟ್ಟುವ ಭಾವಗಳೂ ಅಷ್ಟೇ ನಿಜ. ಪಾಂಚಭೌತಿಕವಾದದ್ದು ಕಾವ್ಯಕ್ಕೆ ಎಷ್ಟು ಅಗತ್ಯವೋ ಅಷ್ಟೇ ನಮ್ಮ ಆದರ್ಶವೂ ಕಲ್ಪನೆಯೂ ಕನಸೂ ಅಗತ್ಯ. ಈ ಎರಡೂ ಸೇರಿ ಆದ ಪಾಕವೇ ಕಾವ್ಯ. ವಿದ್ಯಮಾನಗಳ, ಅನುಭವಗಳ ಆದರ್ಶಸ್ವರೂಪದ ಕನಸಿನ ಒಂದಂಶ ಸೇರದೆ ಇದ್ದದ್ದು ಕಾವ್ಯವಾಗಲೀ ಸಾಹಿತ್ಯವಾಗಲೀ ಆಗಲಾರದು. ಈ ದೃಷ್ಟಿಯಿಂದ ಆಧುನಿಕ ಇಂಗ್ಲಿಷ್ ಕಾವ್ಯದ ಪ್ರಸಿದ್ಧ ಕವಿಗಳಾದ ಈಲಿಯಟ್ ಆಡೆನ್ ಮುಂತಾದವರಿಂದ ನಾವು ಇನ್ನು ಮುಂದೆ ಸ್ಫೂರ್ತಿ ಪಡೆಯಬೇಕಾದ್ದು ಅತ್ಯಗತ್ಯ. ಆದರೆ ನಮ್ಮ ಹೊಸ ಕವಿತೆ ಆ ಇಂಗ್ಲಿಷ್ ಕವಿಗಳ ಕಾವ್ಯದಂತೆಯೇ ರೂಪುಗೊಳ್ಳಲಾರದು. ಆ ಕವಿಗಳ ಅಂಧಾನುಕರಣೆಯಿಂದ ಹೊಸತನ ಬಂದೀತು, ಆದರೆ ಅದು ಕಾವ್ಯವಾಗಲಾರದು. ನಮ್ಮ ಹೊಸ ಕಾವ್ಯ ನಮ್ಮ ನಾಡಿನ ಹೊಸ ವಾತಾವರಣಕ್ಕೂ ನಮ್ಮ ಜನಜೀವನಕ್ಕೂ ನಮ್ಮ ಹೊಸ ಭಾಷೆಯ ಪರಿಪಾಕದ ಪರಿಮಿತಿಗೂ ಒಳಪಟ್ಟಿದೆ ಎಂಬುದನ್ನು ನಾವು ಎಂದೂ ಮರೆಯತಕ್ಕದ್ದಲ್ಲ.

ಎಂದರೆ ನನ್ನ ಈ ಕವನಸಂಕಲನದಲ್ಲಿ ಅಂಥ ಹೊಸ ಕವಿತೆಗಳೇ ತುಂಬಿವೆ ಎಂದು ಅರ್ಥವಲ್ಲ. ಇಲ್ಲಿನ ಕವನಗಳಲ್ಲಿ ಹೆಚ್ಚಿನವು ಹಳೆಯ ಕಾವ್ಯಮಾರ್ಗದಲ್ಲೇ ಬರೆದಂಥವು. ಬಹಳ ಹಿಂದೆ ಎಂದರೆ ೧೯೩೨–೪೦ರ ಸುಮಾರಿಗೆ ಬರೆದ ಪದ್ಯಗಳೂ ಇಲ್ಲಿ ಇವೆ. ಇತ್ತೀಚೆಗೆ ಬರೆದ ಪದ್ಯಗಳಲ್ಲಿ, ಮುಖ್ಯವಾಗಿ 'ನಡೆದು ಬಂದ ದಾರಿ', 'ಭರವಸೆ', 'ಗಾಂಧಿ', 'ಓ ನನ್ನ ಜನವೇ', 'ವಿಫಲ', 'ಹೊಸ ಗಾಳಿ', 'ಇಂದು ನಮ್ಮಾ ನಾಡು'—ಇವುಗಳಲ್ಲಿ ಈ ಹೊಸ ಪ್ರಯೋಗದ ಕೆಲವು ದೃಷ್ಟಾಂತಗಳಾದರೂ ಸಹೃದಯರಿಗೆ ಕಾಣಿಸಬಹುದು. ನಾನು ಈವರೆಗೆ ಹೇಳಿದ ಮಾತು ನಾನೂ ನನ್ನ ಹಾಗೆ ಯೋಚಿಸುವ ಕವಿ

ಮಿತ್ರರೂ ಇನ್ನು ಮುಂದೆ ಬರೆಯಬಹುದಾದ ಕವನಗಳಿಗೆ ಸಂಬಂಧಪಟ್ಟಿದು. ಈ ಸಂಕಲನದ ಮಧ್ಯಭಾಗದಲ್ಲಿ—'ಜೀವಸಖಿ' ಎಂಬ ಕವನದಿಂದ 'ಪರಿತಾಪ' ಎಂಬ ಕವನದವರೆಗೆ—ಇರುವ ಪ್ರಣಯಕ್ಕೆ ಸಂಬಂಧಪಟ್ಟ ಕವನಗಳಲ್ಲಿ ಹೆಚ್ಚಿನವನ್ನು ಬರೆದದ್ದು ೧೯೩೮-೪೨ರ ಸುಮಾರಿನಲ್ಲಿ ಎಂಬುದನ್ನು ರಸಿಕರು ಗಮನಿಸಬೇಕು. ಅವುಗಳಲ್ಲಿ ಕಾಣಬಹುದಾದ ಅಪ್ರಬುದ್ಧ ಭಾವಾತಿರೇಕವನ್ನು ಆ ದೃಷ್ಟಿಯಿಂದ ವಿವೇಚಿಸಬೇಕು.

ಈ ಕವನಸಂಕಲನ ಇಂದಿಗೆ ಮೂರು ವರ್ಷಗಳ ಹಿಂದೆಯೇ ಅಚ್ಚಿಗೆ ಸಿದ್ಧವಾಗಿತ್ತು. ಇದರ ಪ್ರಕಟನೆ ಇಷ್ಟು ಹಿಂದೆ ಬೀಳುವುದಕ್ಕೆ ನಮ್ಮ ಪ್ರಕಾಶರಲ್ಲಿ ಇತ್ತೀಚೆಗೆ ಬೆಳೆಯುತ್ತಿರುವ ಕವಿಕಾವ್ಯಪಕ್ಷಪಾತವೇ ಕಾರಣ. ಈ ಸಂಕಲನದ ಪ್ರಕಟನೆಯ ಭಾರವನ್ನು ಹೊತ್ತ ಅಲ್ಪಾವಧಿಯಲ್ಲೇ ಇದನ್ನು ಇಷ್ಟು ಸುಂದರವಾಗಿ ಸಮರ್ಪಕವಾಗಿ ಮುದ್ರಿಸಿ ಪ್ರಕಟಿಸಿ ಶ್ರೀಮಾನ್ ರಾ. ನಾ. ಹಬ್ಬು ಅವರು ಕಾವ್ಯದಲ್ಲಿ ತಮಗಿರುವ ಅಭಿಮಾನವನ್ನು ತೋರಿದ್ದಾರೆ. ಅವರನ್ನೂ, ಮೊದಲಿನಿಂದಲೂ ನನ್ನ ಕಾವ್ಯಜೀವನಕ್ಕೆ ಬೆಂಬಲವಾಗಿ ನಿಂತ ಎಲ್ಲ ಗೆಳೆಯರನ್ನೂ ಇಲ್ಲಿ ನೆನೆಯುತ್ತೇನೆ. ಹೀಗೆಂದು ಈ ಕವನಸಂಕಲನವನ್ನು ಕನ್ನಡನಾಡಿನ ಕಾವ್ಯಪ್ರಿಯರ ವಿಮರ್ಶೆಗೆ ಅರ್ಪಿಸುತ್ತೇನೆ.

೫೭೮, ಕೃಷ್ಣರಾಜವನಂ<br>ಮೈಸೂರು<br>೧೮—೨—೧೯೫೨

**ಎಂ. ಗೋಪಾಲಕೃಷ್ಣ ಅಡಿಗ**

# ಪರಿವಿಡಿ

# ನಡೆದು ಬಂದ ದಾರಿ

೧

< ನಡೆದು ಬಂದ ದಾರಿಕಡೆಗೆ
ತಿರುಗಿಸಬೇಡ,—
ಕಣ್ಣ—
ಹೊರಳಿಸಬೇಡ. >

ಮಬ್ಬಿಗಿಳಿದ ಸಾಲುಸಾಲು ಅಮೃತಶಿಲೆಯ ಗೋರಿ,
ಕತ್ತಲೆದೆಯ ಚೂರಿ ;
ಮನದ ಮಕ್ಕಳೆಲ್ಲ ನಕ್ಕ ಮಲ್ಲಿಗೆಬನ ತೋಟ,
ಮರೆದು, ಮಸಣವಾಟ.
ಹಲಸು ಮಾವು ಆಲಬೇಲ ಸೆರಗನೆತ್ತಿ ಕಣ್ಣಿಗೆ,
ಸುಯ್ಯುವೆಲರು ತಣ್ಣಗೆ ;
ಕಮಲದೆದೆಯ ಅಳಿ ಪರಾಗ ರಾಗ ಕಾಲಕೂಟ,
ವಿರಹ ಚಿತ್ರಕೂಟ ;
ಹಸುಳೆಚಂದ್ರ, ಮೇಘತಂದ್ರ, ನಿಶಾನಾಗಬಂಧ,
ಉಸಿರು ಮಂದ, ಮಂದ.
ಕಂಬನಿಗಳ ಕಾರಿ ಖಾರಿ ತಳಮಳಿಸಲು ಸುತ್ತಲೂ
ತೆಂಗು ತಲೆಯನೆತ್ತಲು ;
ಇಳಿದ ಕಡಲು, ಕೊರೆದ ಮಳಲು ; ಉಡಿದಹಾಯಿ ಹರಕಲು,
ಒಡೆದು ಹಡಗು ಬೋರಲು.
ಅಹಾ, ಕೊಳದಿ ಬಾಲರವಿಯ ಅಂಬೆಗಾಲ ಲೀಲೆ,
ಅಲೆಯ ವಲಿಯ ಮೇಲೆ ;
ಹಿನ್ನೋಟದ ದಿಣ್ಣೆತಲೆಯ ಚಿಮ್ಮಿ ಹಾರು ಮುಂದೆ,
ನೋಡಬೇಡ ಹಿಂದೆ !

೨

ಮುಂದೆ ನೋಡು ದಾರಿ ಸಾವಿರಾರು ಮೈಲಿ ದೂರ,
ಸಾಲುಸಾಲು ಡೇರ ;
ಮರಳು ಕಾಡು, ತಲೆಯ ಓಡು, ಎಲುಬುಗೂಡು ಮೆಟ್ಟಿಲು,
ಜೀವ ಪಟ್ಟ ತೊಟ್ಟಿಲು.
ಹೆಜ್ಜೆಗೊಂದು ಬಿಸಿಲುಗುದುರೆ ಬೆನ್ನನೇರಿ ತೂಗಿ,
ಮುಂದೆ ದಾರಿ ಸಾಗಿ ;
ಕರೆಯುತಿದೆ ಅಲ್ಲಿ ದೂರ, ಬೆಳುದಿಂಗಳ ತಾರಿ,
ಕನಸುಹಾಯಿ ಹಾರಿ ;
ಬೆಳ್ಳಿಯಿರುಳು, ಮಂಜುಮುಜಲು, ತಾರೆಮಹಲು ದಾಟಿ,
ದಿಗ್ದಿಗಂತ ಮೀಟಿ.
ಗುಳ್ಳೆಗುಳ್ಳೆದನಿಯ ಮೇಲೆ ಮಳೆಯ ಬಿಲ್ಲು ಬಾಗಿ,
ಹೇಗೋ ಮುಂದೆ ತೂಗಿ ;
ಆ ಅಪಾರ ನೀಲಲೋಲ ವೀಚಿಜಾಲ ನೂಕಿ,
ಆಚೆ ಕಾಲು ತಾಕಿ ;
ಪಾರಿಜಾತ ತೋಟದಲ್ಲಿ ಪಾರಿವಾಳ ಮೂರು,
ಗೋಪುರತುದಿಗೇರು :
ಶುನಶ್ವಪಾಕ, ದ್ವಿಜಬಲಾಕ, ಗಜಗೋಬಕ—ಸರಿಗಮ,
ಹಳ್ಳ ತಿಟ್ಟು ಸರಿಸಮ.
ಗೋಳಗಾಜು ಝಗ್ಗನೊಡೆದು ನಗ್ನದೀಪ ಸಂಭ್ರಮ,
ಕೃಷ್ಣ ಬುದ್ಧ ಅಲ್ಲಮ.

ನಡೆದು ಬಂದ ದಾರಿಕಡೆಗೆ
ತಿರುಗಿಸಬೇಡ,
ಕಣ್ಣ
ಹೊರಳಿಸಬೇಡ.

# ಅಲ್ಲಾಗಲಿ

ಅಲ್ಲಾಗಲಿ ಅಥವಾ ಇಲ್ಲಾಗಲಿ
   ಸಲ್ಲದೆನ್ನ ಬೇಡ—
   ಒಳ್ಳಿತು—
ಎಲ್ಲೂ ಒಂದೆ ನೋಡ.
ಸೆಣಸು ನಿಲಿಸು ಒಳ್ಮನಸುಪತಾಕೆ ;
ಬೀಳದಂತೆ ಜೋಕೆ !

ಕಲ್ಲಾಗಲಿ, ಬರುಮುಳ್ಳಾಗಲಿ, ಮಧು
   ಚೆಲ್ಲುವ ಅಲರೇ ಆಗಿರಲಿ ;
   ಎಲ್ಲಕು ಸರ್ವಂಸಹೆಯು ಸೋಗಿಲೇ,
   ಸದಾ ಆರ್ದ್ರ ಆಕಾಶದ ಕಾವಲೆ,
   ತಟ್ಟದರೇ ತೆರೆವೆದೆಮೆದು ಬಾಗಿಲೆ,
   ನೂಕು ನುಗ್ಗು ಒಳಗೆ,
   ಸಾರಲು,
   ಹೆದರಬೇಡ ಬಳಿಗೆ :

ಒಳಮನ ದೇವರ ಮನೆಮಣೆಯಲ್ಲಿ
ಇದೆ ಇಂದಿಗು ಆ ದೀಪದ ಮಲ್ಲಿ ;
ಎಣ್ಣೆ ತೀರಿ ಕರಟಿದರೂ ಬತ್ತಿ,
ಒತ್ತಿ ತುಳಿದರೂ ತಮಸ್ಸು ಮುತ್ತಿ,
ಹೂಡಿದೆ ಕತ್ತಲ ಕೂಡೆ ರಣ,
ಈ ಚಿತ್ಕಣಘನ ಚಿರಂತನ.

ನೋಡಿ ಬೀಗು ; ಸಂದೇಹ ನೀಗು ; ಸಾ-
   ಷ್ಟಾಂಗ ಬಾಗು ಅದಕೆ ;

ಒಲವಿನ ಹನಿಮಣಿ ಕೊಡು ಕೈಗಾಣಿಕೆ ;
ಎರೆಯೊ ನಿನ್ನ ಎದೆಯೊರತೆ,—
ಬೆಳಕಿಗೆ—
ಬಾರದಂತೆ ಕೊರತೆ !

ಅಲ್ಲಾಗಲಿ ಅಥವಾ ಇಲ್ಲಾಗಲಿ
ಸಲ್ಲುವಂಥದಯ್ಯ,—
ಒಳ್ಳಿತು—
ಸದಾ ನವ್ಯದಿವ್ಯ.
ಸೆಣಸು ನಿಲ್ಲಿಸೊಳ್ಮನಸು ಪತಾಕೆ—
ಬೀಳದಂತೆ ಜೋಕೆ.

# ಭರವಸೆ

ಬೆಳೆಯಲು ಶುಭ ಬೇಕಯ್ಯ ಯುಗಯುಗ,
ಕಾದು ಕುಳ್ಳಿರೋ ತಾಳದೆ ಉಬ್ಬೆಗ.

ಒಳಬಾನಿನ ಕಂಬನಿ ಹನಿಯಲಿ ಜಿನು
ಜಿನುಗಲಿ ಧರೆಗೆ ನಿರಂತರ ;
ಮಿಂಚೂ ಮಿಂಚಲಿ, ಗುಡುಗೂ ಗುಡುಗಲಿ,
ಉಡುಗದಿರಲಿ ಗೆರೆ ತುಂತುರ.

ಬಚ್ಚಲ ಬಳಿಯೇ ಬಳ್ಳಿಮಲ್ಲಿಗೆ,
ಚರಂಡಿ ಬಳಿಯೇ ಚಂಪಕ ;
ಕೊಳೆವ ತಿರುಳ ತಳಕಿರಲಿ ಬೀಜ ಚಿರ—
ಸುಪ್ತ ಸುರಭಿಸಂಗೋಪಕ.

ಒಡಕು ಮಡಕೆದನಿ ಕೆಳಗೆ ಪಿಟೀಲು,
ಕಾಗೆ ಗೂಗೆ ಬಳಿಯೇ ಪಿಕ ;
ಬಧಿರ ಗಲಭೆಗಳ ದಡದಿ ವೇಣುರವ,
ಶಿವೋಗ್ರಪದ ಪರಿಪೋಷಕ.

ಇರುಳ ಬೀದಿಗಳ ಸಂದಿಗೊಂದಿಯಲಿ
ಅಗೋ ಹಣತೆ, ಇಗೊ ದೀವಟಗೆ ;
ಬರುವ ಬೆಳಕು ಗೋಪುರದೊಡ್ಡೋಲಗ
ಭವನಕೆ ಬಿಡಿಬಿಡಿ ಪಾವಟಗೆ.

ಮುಕ್ಕಿಮೊರೆವ ತೆರೆರಕ್ತರೌದ್ರದಲಿ
ಅಗೋ ಚುಕ್ಕೆ ಚುಕ್ಕಾಣಿ ದಯೆ ;

ಬಿಟ್ಟ ಹಾಯಿಚಲ ಅನುಕೂಲಾನಿಲ
ಆಚೆ ಸುಧೆಯುಗುವ ಕಿನಾರೆಗೆ.

ಇರಲಿ ಇರಲಿ ಶುಭದೆಲ್ಲ ಸಂತತಿ ;
ರೆಕ್ಕೆ ಹೊರೆಯದೀ ಎಲ್ಲ ಮರಿ.
ನೀಲದಾಳದೊಲವಿಬ್ಬನಿ ಇಳಿದರೆ
ಮೊಳೆಯದೆ ಒಂದೊಂದೇ ಗರಿ ?

ಮೊಳೆಯೆ ಬೆಳೆಯೆ ಶುಭ ಬೇಕು ಯುಗಯುಗ,
ಕಾದು ಕುಳ್ಳಿರೋ ತಾಳದೆ ಉಬ್ಬೆಗ ! —

# ಗಾಂಧಿ

## ೧

ಗಾಂಧಿ, ಗಾಂಧಿ, ಗಾಂಧಿ!

ಈ ಬಚ್ಚಲ ಕಗ್ಗವಿಯಲಿ
ತಮದ ಸಂತೆ ಗದ್ದಲದಲಿ
ಬಂತೆಲ್ಲಿಂದೆಂತು ಹೇಳು
ಈ ಅಮೂಲ್ಯ ಮಾಲು–
ನಾಲಗೆಗುಡಿ ಚೆಂಬೆಳಕುಲಿ
ಕುಡಿದೀಪದ ಸಾಲು?

ಬಾನ ಕರುಳು ಕರಗಿತೋ,
ಮುಗಿಲ ಕಣ್ಣು ಹನಿಯಿತೋ,
ಬೀದಿಯಲ್ಲಿ ಬಿಂದು ಬಿಂದು
ಬೆಳಕು ಬಂದು ಕುಣಿಯಿತೋ!

ಇಲ್ಲ? ನೋಡು ಸುತ್ತಲೂ:
ಒಳಗೆ ಕಾಳ ಕತ್ತಲು.
ಅವಳೆ ಬೆಳಕ ಹೆತ್ತಳೋ,
ನಾಲಗೆಗದನಿತ್ತಳೋ,
ಹೆತ್ತು ಅದನು ತುತ್ತಲು
ಹೊಟ್ಟೆಯಲ್ಲಿ ಹೊತ್ತಳೋ!

ಬಚ್ಚಲಲ್ಲಿ ಬೆಳೆವ ಕೊಳೆ
ಬಗೆವುದೇನೊ ಇಂತು:
ಈ ಹೊಸನರುಗಂಪು, ಸೊಂಪು,
ಈ ಪದಂಪು, ಈ ತಂಪು

ದೂರದ ದಿವಮಂದಾರದ ಗಂಧದ ಗಣಿಯಿಂದ
ಬಂತು. ಬಂತೆ? ಬಂದಿತ್ತೆ?
ಕೊಳೆ ಕಂಪನು ಬಯಸಿತ್ತೇ?
ಓವ್ವೋ, ಬರಿ ಕನಸು ಮತ್ತೆ!
ಬಚ್ಚಲಲ್ಲಿ ಕೊಚ್ಚೆಯು,
ರೊಚ್ಚೆಯೋ ರೊಚ್ಚೆಯು!

೨

ಕಾಡನಲಿವ ನರಪಶುವಿನ
ಮಿಡುಕಿತೊಮ್ಮೆ, ಹುಡುಕಿತು:
ಹೃದಯತಳದ ಗೂಢನಿಧಿಯ
ನೆನಪು ಮನಕೆ ದುಡುಕಿತು.
ರಕ್ತ ಬಸಿವ ಹಸಿಮಾಂಸವ
ನೆಕ್ಕುತಿರುವ ನಾಲಗೆ,
ತೊಗಲುಚೀಲದಾವೇಶಕೆ
ಒತ್ತುತಿರುವ ಒಳಬಗೆ;
ತೊಡೆಯೆದೆಗಳ ರೋಮಾಂಚಕೆ
ಬೀದಿವರಿವ ಬೆಳ್ನಗೆ;
ಇಂದು ಏಕೆ ಭಣ ಭಣ?
ಏಕೆ, ಏನು ಕಾರಣ?

ಬೇಸರೋ ಬೇಸರು;
ಒಳಗೆ ಯಾಕೊ ಆಸರು.
ಕತ್ತಲಲ್ಲಿ ಮಿಂಚಿನ ಮರಿ
ತಿವಿವುದಹಾ ಗರಿ ಕೆದರಿ,
ಬೀಳುತಿದೆ ಜೇನ ಸರಿ:

## ನಡೆದು ಬಂದ ದಾರಿ

ಒಲವು, ಒಲವು, ಒಲವು !
ಎಂಥ ಸೆಳವು, ಏನು ನೋವು !

ಬಾನ ತುಟಿಯು ಬುವಿಯ ತುಟಿಯ
ಮೀಟಿ ಹೋಯಿತೋ,
ಕನಸಿನೀಟಿ ಮನವ ನಾಟಿ
ದಾಟಿ ಹೋಯಿತೋ ;
ಒಳವ ತಳವ ಮುದ್ರೆಯೊಡೆದು
ಚಿಲುಮೆ ಚಿಮ್ಮಿತೋ,
ಹೃದಯ ತಾನೆ ಕಡೆದ ಬೇನೆ
ಬೆಣ್ಣೆ ತೇಲಿತೋ—

ಒಳ ಹೊರಗೂ ದಿಗಿಲು, ಬೆರಗು ;
ಕಲ್ಲಿನಂಥ ಮನ ಮುಗುಳು ;
ಕಾಣಲಿಲ್ಲ ಈ ವರೆಗೂ
ಇದು ಏನಹ ಯಾವ ಪಿಡುಗು :
ಭೋಂಕನೆದೆಯ ಅವುಂಕುತಿರುವ
ಯಾವ ತಟಿತ್ಸ್ಪಂದವು,
ಇದೆಂಥ ದಿಗ್ಬಂಧವು !

ಬೇರೆತನದ ಗೋರಿಯೋ,
ಇದೇನೆ ಬಾಳ ದಾರಿಯೋ,
ಮರದೊಳೆಲ್ಲೊ ಅರಗಿದಂಥ ಅಗ್ನಿಸಾರವೋ,
ಮೊಗ್ಗೆಯಲ್ಲಿ ಮಲಗಿದಂಥ ಗಂಧಭಾರವೋ !

ತಡೆಯಲಾರೆ—ಸಾಕು ಬಿಡು ;
ಓ ಕತ್ತಲೆ, ತೊಡೆಯ ಕೊಡು ;
ಕಟ್ಟೊಲುಮೆಯ ತೊಟ್ಟಿಲಲ್ಲಿ
ಕಟ್ಟಾಡಿಸಿ ತೂಗು ;

ತೊಡೆದು ಬಿಡು; ತೊಡೆದು ಬಿಡು
ಮಿಂಚಿನ ನೆನಪ;
ಹೀರಿ ಬಿಡು, ಹೀರಿ ಬಿಡು
ಒಲವಿನ ಅನುಪ!

ಹಾದರಕೇ ಹುಟ್ಟಿದಂಥ ಮುಗುವದು,
ಏನು ವಿಕಟ, ಎಂಥ ವಿಕೃತ ನಗುವದು;
ನಮ್ಮ ನಲವನುಣಲು ಬಂದ ಹಗೆಯದು!
ಹೂಳು, ಹೂಳು, ಹೂಳು!
ಬಚ್ಚಲಾಳದಲ್ಲಿ ಕುಣಿಯ ತೋಡು,
ಅಲ್ಲಿ ಹುಗಿದು ಬಿಡು,
ಮೇಲೆ ನಾನುತನದ ಮುದ್ರೆ
ಭದ್ರವಾಗಿ ಒತ್ತಿಬಿಡು;
ನಲವಿಗೊಂದೆ ಮೈ ಕೊಡು:

ಬಳಿಯ ಹೆಣ್ಣ ಮೊಲೆ ತುಟಿ ಮೈ
ದಿಂಡು ತೊಡೆಯು—ಸೈ, ಸೈ, ಸೈ!
ಥೈ, ಥೈ, ಥೈ-ತಕ ಥೈ ಥೈ....
ನಡೆಯಲಿನ್ನು ನಾಟ್ಯ ಕಾಳಕತ್ತಲಲ್ಲೇ,
ನಾಲ್ಕು ಗೋಡೆನಡುವಣ ಕಿರುಕೋಣೆಯಲ್ಲೇ.

ಕೊಲ್ಲುವಾಟ ( ಬಂದಳಿಕೆ! )—
ಅದೇ ಬೆಳೆಯು, ಅದೆ ಗಳಿಕೆ!
ಕೊಂಚನಯ, ಕೊಂಚ ನುಣುಪು,
ಏನೊ ಭಯ, ಕೊಂಚ ದಯ,
ಕಾಡ ಪಶುವ ಬಿಸವಂದ,
ನಾಡಿನೊಡೆಯ ನರ ಬಂದ!

೩

ಕೊಲ್ಲುವಾಟ ಮುಗಿದ ಮೇಲೆ
ಬಾಳಿನ ನೊರೆ ರಾಸಲೀಲೆ :
ಚೆಲುವೊಲವೋ, ನಲವೊ ತಿಳಿವೊ
ನಯಜೇಡದ ಭಯಜಾಲವೊ
ಕವಿಋಷಿಗಳ ರಸವು ಜಸವು
ದಿನದಿನಕೂ ಹೊಸವು ಹೊಸವು.
ಕೊಲೆಬಿದ್ದಿಗೆ ಬಾಯ್ಕಟ್ಟಲು
ನಡುವೆ ಬೇಕು ನಂಜಿಕೊಳಲು
ಈ ಸಂಸ್ಕೃತಿಲೀಲೆಯು ;
ನೆತ್ತರ ಕಡಲಲ್ಲು ಬೇಕು
ಜೀವರಸದ ಗಣಿಗಳು,
ಕೊರಳ ರುಂಡಮಾಲೆಯಲ್ಲು
ಕಂಬನಿಗಳ ಮಣಿಗಳು.

ನೆಲವು ಬೆಂಕಿ ನೀರು ಗಾಳಿ
ಮನೆಯ ತೊತ್ತುಗೆಲಸಕೆ ;
ಗಂಥವನ್ನು ಬಳಿದಾಯ್ತು
ಒಳಗಿನೆಲ್ಲ ಹೊಲಸಿಗೆ—
ಇದೇ ದಿವ್ಯ ಜೀವನ,
ಆತ್ಮರಸದ ದೋಹನ !

ನರಿಯು, ನಾಯಿ, ಹುಲಿ, ತೋಳ
ಕೆಲವು ಹೊತ್ತು ಆಸತ್ತು
ಬಯಲ ಬಿಟ್ಟು ಮುಸುಕ ತೊಟ್ಟು
ಗವಿಯೊಳವಿತುಕೊಂಡುವು ;

ಹಸುವು, ಹುಲ್ಲೆ, ಚಿಗರೆ, ಕಡವೆ,
ಕಲಕೋಕಿಲ, ಗೊರವಂಕ,
ಗಿಳಿ ಅಳಿಗಳು ನಿಶ್ಶಂಕ
ನಂದನದಲಿ ಒಂದೆ ನಿಮಿಷ
ಬಿಟ್ಟು ಎಲ್ಲ ತಳ್ಳಂಕ
ಆಡುವಂತೆ ಕಂಡುವು—
ಆರಿದಂತೆ ತೋರುವಂಥ ಅಗ್ನಿಗಿರಿಯ ಮುಖದಲಿ,
ಬೆಳಕೆ ಪಟ್ಟವೇರಿತೇನೊ ಎನ್ನುವಂಥ ಸುಖದಲಿ !

ಮರುನಿಮಿಷವೆ ಬಂತು, ಪಾಪ ! —
ಭೂಕಂಪದ ಅಪಲಾಪ,
ಅಗ್ನಿಮುಖಿಯ ವಿಪ್ರಲಾಪ ;
ಕತ್ತಲೆಂಬ ಪ್ರಳಯಕಾಲವಾರಿನಿಧಿಯ ನಾಲಗೆ
ಕಿತ್ತು ಬಿಸುಟಿತಲ್ಲ, ನೋಡು, ಬೆಳಕಿನೆಲ್ಲ ಪೀಳಿಗೆ.

ಒಂದೊ ಎರಡೊ ಮರಿಗಳು
ತಪ್ಪಿ ಜಾರಿ ಜಗುಳಲು
ನೋನುತಿರುವ ನೋಹನೆಂಬ ಗಾಂಧಿಯೆಂಬ ದುರ್ಗಕೆ,
ಅಲ್ಲಿ ತಪೋಮಾರ್ಗಕೆ—
ನಡೆಯಲಿನ್ನು ನಾಟ್ಯ ಕಾಳಕತ್ತಲಲ್ಲೇ,
ನಾಲ್ಕುಗೋಡೆ ನಡುವಣ ಕಿರುಕೋಣೆಯಲ್ಲೇ !

೪

ಗಾಂಧಿ, ಗಾಂಧಿ, ಗಾಂಧಿ !
ಮರೆವುದೆಂತು ಹೇಳು, ಒಳಗೆ
ಹೊತ ಮಗುವನು ;

ತೊಡೆವುದೆಂತು ಆ ಅಪೂರ್ವ
ನೋವು ನಗುವನು ?

ಅತ್ತಲಿತ್ತಲೆತ್ತಲೂ
ಮಿಂಚು ಗೊಂಚಲೆರಚಲು ;
ಕೃತಿಕೃತಿತಳಪಾಯ ಬಾಯ
ತೆರೆಯೆ ಮಿಂಚು ಹೊಂಚಲು ;

ಈ ಮಿಂಚಿಗೆ ಬೇರೆ ಏನು ಕೆಲಸ ಬೇಡವೆ ?
ಎದೆಯಂಚಿಗೆ ಉರಿಯನೆರಚಿ ನೋಡುವಾಟವೇ ?
ಕತ್ತಲನ್ನು ಕೆಣಕಲೇಕೆ ?
ಇಲ್ಲದ ಭಯ ತಿಣುಕಲೇಕೆ ?
ಅದರ ಪಾಡ ನೋಡೆವೆ ?

ಪರದೇಶಿಯ ಹಾಗೆ ಬಂದು ತೊಳಲುತಿರುವ ಪಾತಕಿ,
ನಮ್ಮ ಸೊಗವ ಕೊಲ್ಲ ಬಗೆವ ಕಳ್ಳನಗೆಯ ಘಾತಕಿ !
ಕತ್ತಲ ಹೊಟ್ಟೆಯೊಳಲ್ಲವೆ ಅದರ ಹುಟ್ಟು—ಸಾವು ?
ಅದನು ಬಿಟ್ಟರಿದಕೆಲ್ಲಿದೆ ಇಲ್ಲಿ ಬೇರೆ ಠಾವು ?
ಏಳುಸುತ್ತು ಕೋಟೆಯೊಳಗೆ
ಒಳಗೆ ರಂಗಮಹಲಿನೊಳಗೆ
ಸ್ಪರ್ಶ, ರೂಪ, ರಸ, ಗಂಧ !
ನೀರಿಳಿಯದೆ ಬಾಯಿಂದ ?
ಆನಂದ, ಆನಂದ !
ಅದು ಅಹ ಕತ್ತಲ ಕಂದ :
ಎದೆಗವಚಿಕೊ, ಮುತ್ತು ಕೊಡು,
ನಿನ್ನನದಕೆ ತೆತ್ತು ಬಿಡು ;
ಕೊಲ್ಲು, ಕೊಲ್ಲು—ಹಗೆ ಬಂದ !
ಗಾಂಧಿ—ಗಾಂಧಿ ಅದೊ ನಿಂದ !

೫

ಮರುಧರೆ, ಕುದಿಕುದಿವ ಮರಳು ;
ತಿವಿಯುತಲಿದೆ ಬಿಸಿಲ ಸರಳು—
' ಓಯಸಿಸ್ಸೋ, ಓಯಸಿಸ್ಸು !
(ಅಹಾ ಸರಸ್ಸು, ರಸಸದಸ್ಸು !)

ಅಲ್ಲೆ, ಅಲ್ಲೆ—ಓ ಅಲ್ಲೇ—
ಆ ದಿಗಂತದತಿ ಸಮೀಪ
ಹೊಸ ನೀರಿನ ರಸಾಲಾಪ ;
ನಡೆ, ನಡೆ, ನಡೆ ಅಣ್ಣಾ
ನಂಬು ನಿನ್ನ ಕಣ್ಣಾ.

ಎಲ್ಲಿ, ಎಲ್ಲಿ, ಎಲ್ಲಿ ?
ಎಲೆ ಮರುಳೆ, ಮರಳೆ ಮರಳು !
ಹತ್ತಿರಲ್ಲಿ, ದೂರದಲ್ಲಿ
ಆ ದಿಗಂತರೇಖೆಯಲ್ಲಿ
ಸುತ್ತಲೂ ಅಪಾರದಲ್ಲಿ
ಎಲ್ಲಿದೆ ಆ ಓಯಸಿಸ್ಸು,
ಆ ಬಾಳ್ನೆಲ, ಆ ಸರಸ್ಸು ?

ಕಂಡು ಕೂಡ ಕಾಣದಂತೆ
ಕರಗಿತಲ್ಲ, ಅರಗಿತು ;
ಮನಕೆ ತಂಪು ತಟ್ಟೆ ಕೂಡ
ಮುಟ್ಟದೆ ವೈಗರೆಯಿತು :

ಆ ಅನಂತಮನದ ಗೊರಸು
ಗೀರಿದಂತೆ ತೋರಿತಲ್ಲ,
ದೇವನದಿಯ ನಲ್ಮೆನೆಳಲು
ನಾಟದಂತೆ ತೋರಿತಲ್ಲ,

ಮಂದಾರದ ಗಂಧಗೀತ
ಸ್ಪಂದಿಸಿದೊಲು ತೋರಿತಲ್ಲ,
ಆಲದೆಲೆಯ ಜೀವಶಿಶುವೆ
ತೇಂಕಿದಂತೆ ತೋರಿತಲ್ಲ !

ಎಲಾ ಇದೇನು, ಎಂಥ ಕನಸು !
ಕನಸೊ, ನನಸೊ ? ಎಂಥ ಮರಸು !
ಅಯ್ಯೊ, ಅಯ್ಯೊ ; ಎಲ್ಲರಸಲಿ—
ಯಾವ ಮರಳ ಭಾರದಲ್ಲಿ ?
ಯಾವ ದಿಗ್ದ್ವಾರದಲ್ಲಿ ?
ಯಾವ ರವಿವಿಹಾರದಲ್ಲಿ ?
ಯಾವ ಶರಧಿತೀರದಲ್ಲಿ ?
ಸೋತೆನಯ್ಯ, ಸೋತೆನು !

ಓ, ಓ, ಓ ಮರುಭೂಮಿಯೆ,
ನಮ್ಮ ತಾಯಿ ಭೂದೇವಿಯೆ,
ನೀನೆ ಶರಣು, ಶರಣು ;
ಶುಷ್ಕ ಶೂನ್ಯ ಶರಣು !
ಇಲ್ಲಿ ನಿನ್ನ ತೊಡೆಯ ಮೇಲೆ
ನಾನು ಸತತ ಬಂದಿ ;
ಅಲ್ಲಿ ಕುಳಿತು ಕನವರಿಸುವೆ :
' ಗಾಂಧಿ, ಗಾಂಧಿ, ಗಾಂಧಿ ! '

# ಕನಸು

ನಿಲ್ಲದು, ನಿಲ್ಲದು ಕನಸೇನೊ ನಿಲ್ಲದು ;
ಈ ಬಾಳ ಧೂಪದ ಹೊಗೆ ನಿಲ್ಲದು ;
ಅಗ್ನಿಕುಂಡಕೆ ಬಿದ್ದ ಗಂಧದ ಕೊರಡಂತೆ
ಬೂದಿಯಾದಲ್ಲದೆ ಹೊಗೆ ನಿಲ್ಲದು.

ತಂಗಾಳಿ ತೊರೆಯಲ್ಲಿ ತಿಂಗಳ ನೊರೆಯಲ್ಲಿ
ಮಯನ ವಿಸ್ಮಯವನು ನೇಯುವುದು ;
ಅಲ್ಲಿ ಕೌರವರಾಯ ಜಾರಿಬಿದ್ದೇಳುವ,
ಮುನಿವನು ನಗೆಗೀಡಾಗುವನು :

ತಳತಳಿಪ ನೆಲವೊ, ತಂಗೊಳವೊ, ತಂಬೆಲರೊ ತುಂ
ಬುರುನಾರದರ ಗಾನವಾಹಿನಿಯೋ ;
ಊರೊ ಕೇರಿಯೊ ವನವನಾಂತರವೋ ಇದು
ಗಂಧರ್ವತೀರದ ತಾರಿಣಿಯೋ.

ಮನದ ಮರ್ಕಟಸೇನೆ ದಾರಿಗೆಟ್ಟಲೆವುದು,
ಇದು ಸ್ವಯಂಪ್ರಭೆಯ ಪಟ್ಟಣಗೊಂದಲ ;
ಹೊಕ್ಕರೆ ಹೊರಡಲಾಗದ ಮಾಟ ಚಂಚಲ,
ಅಡಿಗೊಂದು ಸುರತರು, ಗಂಧಾನಿಲ.

ಮೋಡದ ಹೊಗೆಹಡಗೇರಿ ಸವಾರಿಯು,
ಅಪ್ಸರೆಯರಡಿಗೆಜ್ಜೆ ಹಿಮ್ಮೇಳವು ;
ತಾರೆತಾರೆಗಳ ಬಂದರಿನಲ್ಲಿ ಲಂಗರು,
ಬೆಳಕು ಬಂಗಾರದ ಬೇಹಾರವು.

ಬಾಯ್ಬಿಡುತಿದೆ ಮೇಲೆ ಮರುಭೂಮಿ ; ಒಳತಳ
ಪದರುಪದರು ನೀರ ಗೆರೆಗೆರೆಯು
ಆವಿಯ ನೂಲೇಣಿ ಏರಿ ಮ್ಯೆಗರೆವುದು
ನೀಲನೀರಧಿಯಲ್ಲಿ ಕಣ್ದೆರೆವುದು.

ಈ ಕಲ್ಲಿಗೆಲ್ಲಿಂದ ಬಂತಿಂಥ ಮಕರಂದ ?
ಕಲ್ಲೊಳಗೂ ಹೂವು ಮಲಗಿಹುದೋ ?
ಹೂವೆ ಕಲ್ಲಾಗಲು ಒಳಜೇನಿನುಕ್ಕಂದ
ಇನ್ನು ಇನ್ನೂ ಮಂದ ಸ್ಪಂದಿಪುದೋ !

ನನಸಿನ ಕೈದಿಯ ಕಾಲ ಸಂಕೋಲೆಯ
ಸರಪಣಿಯ ಝಣಝಣ ಝಂಕಾರವೋ ;
ಬಲಿಮರಕೋಡುವ ಕುರಿಬಾಳ ಕೊರಳಿನ
ಗೆಜ್ಜೆಗಂಟೆಗಳ ಮರ್ಮರನಾದವೋ !

ತಿಳಿಯದು, ತಿಳಿಯದು ; ನನಸಿಲ್ಲಿ ಕೊಳೆವುದು,
ಕುರುಡುನಿದ್ದೆಗೆ ಸಂದು ಕೊರಗುವುದು.
ನಿಲ್ಲದು, ನಿಲ್ಲದು—ಕನಸೇನೊ ನಿಲ್ಲದು ;
ಈ ಬಾಳ ಧೂಪದ ಹೊಗೆ ನಿಲ್ಲದು.

# ಫಣಿ

ಅಳುಕುವೆನು ನಾನು ನನ್ನೊಳಬಾಳಿನೆಳದನಿಗೆ,
ಪಿಸುಮಾತಿನುರವಣೆಯ ಫಣಿಗೆ;
ಊದುವೆನು ಪುಂಗಿಯನು ದಿನವು ದಿನವು,
ಮರೆತು ಮಲಗಲಿ ಎಂದು ನನ್ನ ಫಣಿಯು.

ಕಾಳಕಾಳಿಂದಿತಳದರ್ಭಕನ ನಿಬ್ಬೆರಗು
ಹೆಡೆಯಾಟ ನೋಡುವುದಕೆನಿತೊ ಚಂದ !
ಮುಟ್ಟೆ ಮೈದಡವಿ ಮುದ್ದಾಡುವಾಸೆಗೆ ಭಾಷೆ
ಮೈಮರೆತು ಜಿನುಗುವುದು ರಸಮರಂದ.

ಹತ್ತಿರಕೆ ಸಾರಿ ಹೆಡೆಮಣಿಯ ಹಿಡಿದಾಡುವೆನೊ,
ಕೋಲ್ಮಿಂಚುನಾಲಗೆಗೆ ತುಟಿಯಿಡುವೆನೋ, —
ಬೇಡ ಬೇಡೋ ಎಂದು ತರ್ಜನಿಯನೆತ್ತುತಿದೆ
ಭವಭವದ ಅನುಭವದ ಭೂತಗಂಧ.

ಮುಟ್ಟಬೇಕೋ ಮುಟ್ಟೆ ಮೈದಟ್ಟೆ ಗುಟ್ಟುಗಳ
ರಟ್ಟುಗೊಳಿಸಲು ಬೇಕೊ, ಇಲ್ಲದಿರಲು
ನಿಂತು ದೂರದಿ ಭಯಭ್ರಾಂತ ಸಂತೋಷದಲಿ
ಹುಟ್ಟುಗಳನೆಷ್ಟನೋ ಕಳೆಯಬೇಕೋ !

# ಎರಡು ಬಾಯಿಯ ಖಡ್ಗ

ಒರೆಯೊಳೊರಗಿದೆ ಗೂಢ ಎರಡು ಬಾಯಿಯ ಖಡ್ಗ—
ಏನು ಮಿರುಗೋ ಅದಕದೆಂಥ ಬೆಡಗೋ ;
ಹೊರಚೆಲುವು ಸಿಪ್ಪೆ ಚಪ್ಪರಿಸಿ ಕೆಟ್ಟಿತು ಕಣ್ಣು,
ತಿರುಳಿನೂಟದ ಕನಸು ಸಾಲದಿನ್ನು.

ಹರಿದು ಬೀಸಾಡು ಒರೆಹೊರೆಯ, ಬತ್ತಲೆಗತ್ತಿ
ಎತ್ತು ; ಪೌರುಷಭೇರಿ ಮೊಳಗುತಿರಲಿ ;
ಇದೆ ಇಲ್ಲಿ ಮಸೆಗಲ್ಲು, ಮಸೆದು ಝಳಪಿಸು, ಕಾಳ
ಕತ್ತಲಿನ ಪಡೆ ದಿಕ್ಕುಗೆಟ್ಟೋಡಲಿ.

ಎಂದು ಹಿರಿದೆನೆ ಅಸಿಯ, ಇರಿದೆನೇ ಅಯ್ಯಯ್ಯೋ,
ನನ್ನೊಳಗೆ ಮಲಗಿದ್ದ ಮುದ್ದು ಮಗುವ :
ಯುಗಯುಗದ ಮುಳ್ಳುದಾರಿಯ ಮೇಲೆ ನಡೆದಳಲಿ
ಆಯಾಸಗೊಂಡ ಮೃದುಭಾವಶಿಶುವ.

ಕಣ್ಣು ಕೋರಯ್ಸುತಿದೆ, ಮನ ಗಾರೆಬೀಳುತಿದೆ,
ಬಾಳ ದಾರಿಯ ಸಂಕ ಮುರಿಯುತ್ತಿದೆ ;
ಒರೆಯ ಸೇರೋ ಸೇರು ; ನಿನ್ನ ಝಳಪಿಪ ಗಂಡು
ಇಂದಿಲ್ಲ; ಮುಂದೇನೊ ಹುಟ್ಟಬಹುದೋ !

# ಬಳಲಿಕೆ

ಎಲ್ಲ ಮುಗಿಯಿತು ಇನ್ನು ; ಮನದೇರು ಬಗೆಯೇರು
ಆಶೆಯೆತ್ತರಕೇರಿ ಬಿದ್ದ ಬಳಿಕ,
ಬಳಲಿಕೆಯ ಕಾಳಪಾತಾಳಕಿಳಿಯಿತು ಜೀವ,
ದೂರವೋ ಇನ್ನು ನಕ್ಷತ್ರಲೋಕ.

ದಂಟ ತೊರೆದೈತಂದು ಒಂಟಿತನದೊಸಗೆಯನು
ಮೆರೆದ ಕಾಲವನೀಗ ನೆನೆಯಬೇಕು ;
ಎಂಟು ದಿಕ್ಕಿನ ಗಾಳಿ ಮಳೆ ಬೆಳಕು ಮಸಗಿರಲು
ಇಳೆಯ ಮರೆತೊರಗಿದೆನು, ಎಂಥ ಬಾಳು !

ಹಸುರು ಹಸುರೇ ಹಸುರು ; ನೆಲವು ಜಲಮುಗಿಲುಗಳು
ಹೊಗಳುಭಟರಾದರೋ ನನ್ನ ಜಸಕೆ ;
ಬಾನ ತಾರಗೆ ಮುಡಿದ ಮುಗಿಲ ಮಲ್ಲಿಗೆಗಾಗಿ
ಬಿಟ್ಟ ಬಾಣವೊ ಎನಲು ಚಿಮ್ಮಿ ನೆಗೆದೆ.

ಬಿಲ್ಲು ಬಾಗಿದ ಭರಕೆ ಬಾಣ ಚಿಮ್ಮುತಲಿತ್ತು,
ಏರಿತೋ ಏರಿತೋ ಮುಗಿಲ ಕಡೆಗೆ ;
ತನ್ನ ವೇಗದ ಗತಿಗೆ ಬಿಲ್ಲಿನಳವಿನ ಮಿತಿಯು.
ಅರಿಯದಂಬಿಗೆ ನೆಲವೆ ಗತಿಯೆ ಕೊನೆಗೆ !

# ಕೆಂದಾವರೆ

ಇಂದು ಕೆಂದಾವರೆಯ ದಳ ದಳಿಸಿ ದಾರಿಯಲಿ
ಗಂಧದೌತಣ ಹೋಗಿ ಬರುವ ಜನಕೆ ;
ಮಂದಮಾರುತನಿರಲಿ, ಮರಿದುಂಬಿಯಿರಲಿ, ಆ-
ನಂದವಿರೆ ಅತಿಥಿಗಳ ಕರೆಯಬೇಕೆ ?

ನಗುತಲಿದೆ ನೀರು ಹೊಂಬಿಸಿಲು ಕಚಗುಳಿಯಿಡಲು ;
ದುಂಬಿಗಳು ಒಲವನೇ ಗುಂಜಿಸಿರಲು
ನಾಚಿ ತಲೆಬಾಗಿಸಿತು ಕಮಲ ; ದೂರದ ಬಾನ
ದಾರಿಯಲಿ ಸಪ್ತಾಶ್ವವೇರಿ ಬಹನು ;

ತನ್ನ ಕೈಕೈಯೊಳೂ ಒಲವುಬಲೆಗಳನಿಟ್ಟು
ನೀರಿನಾಳದೊಳವನು ಬಿಂಬಿಸುವನು ;—
ಮೈಮರೆತುದಾ ಪದ್ಮ; ಪರಮೆಗಳ ಪರಿವಾರ
ಮಂಜಾಗಿ ಕರಗಿತ್ತು ಸುತ್ತಮುತ್ತ.

ಇರುವ ದುಂಬಿಯ ಬಿಟ್ಟು ಬರುವ ನೇಸರ ಕರೆಗೆ
ಓಗೊಟ್ಟುದೋ ನನ್ನ ಕೆಂದಾವರೆ ;
ಬರುವ ಬಾಳಿನ ಕನಸು ರವಿಯಾಗಿ ಬಹುದೇನು ?
ಕಾಯಬೇಕೋ ಅದಕೆ ಎಲ್ಲಿವರೆಗೆ ?

# ಆಗು ನೀನು

ಆಗು ನೀನು ಇಬ್ಬನಿ ನೆಲಸುವ ಹೂ ;
ದುಂಬಿ ನೊರೆವ ಮಹಲು ;
ಬರಲಿ ಅಲ್ಲಿ ಗಿಳಿ, ಕೋಗಿಲೆ, ಕಾಗೆ ;
ಒರೆಯಲೆಲ್ಲ ಅಹವಾಲು.

ಕತ್ತಲಲ್ಲಿ ಬೆಳವುದೊಂದೆ ಕೆಲಸ,
ನಸುಕು ಹರಿಯೆ, ಮೃದು ಹಾಸ ;
ಹಗಲು ನಗಲು ನರುಗಂಪ ಲೋಕಕೆ
ಸ್ವಾಹಾ ಎಂಬ ವಿಕಾಸ.

ಸಂಜೆ ಮಾಗಿ ಬರೆ, ಅಂಜದೆ ಎಲೆಮರೆ
ಬಾಡಿ ಬೀಳುವ ವಿರಾಗ ;
ಬರುವ ಹಣ್ಣಿನೊಳತಳದಿ ಕುಳಿತು ಚಿರ
ಕನಸು ಕಾಂಬ ಅಭಿಯೋಗ.

# ಭೂಮಿತಾಯಿ

ಓ ತಾಯೆ, ಭೂಮಿ ತಾಯೆ,
ನೂರು ಮೊಗದ ನೂರಾರು ಸೊಗದ ಚೆಲುವಿನೊಡಲ ಕಡಲ
ದಿವ್ಯಭವ್ಯಕಾಯೇ,
ಉರಿದು ಆರಿ, ಆರಿ ಕೂಡ ಆರದಂಥ ನೋವಿನಿಂದ
ನವೆವ ನಿಸ್ಸಹಾಯೆ,
ಇಲ್ಲಿ ನಲವು, ಅಲ್ಲಿ ನೋವು, ಅಲ್ಲಿ ಹುಟ್ಟು, ಇಲ್ಲಿ ಸಾವು—
ಮೃದುಕಠೋರಗೇಯೆ.

ಬಂದನಿಗೋ ನಿನ್ನ ಕಂದ,
ಮರೆತು ಹೋದ ಪಾಪಿ ಅಂಧ—
ಎಡಹುತ, ತಡಹುತ, ತುಡಿಯುತ
ನಿನ್ನ ತೊಡೆಯನರಸುತ;
ಬಂದನಿಗೋ ಕರಕರಗುತ;
ಓಗೊಡು, ಓ ತಾಯೆ, ಸಹಸ್ರಾರು ಕಂಠದಿಂದ;
ಏಳು, ಎದ್ದೇಳು;
ಬರಸೆಳೆದುಕೊ, ಅಪ್ಪಿಕೊ;
ದಿಕ್ಕುದಿಕ್ಕಿನಿಂದ
ಚಾಚು ನಿನ್ನ ಕೈಯ,
ಬಾಚು ನನ್ನ ಮೈಯ;
ಬೆಂಕಿ ನೆಕ್ಕುವಂತೆ ನೆಯ್ಯ
ನೆಕ್ಕು ನನ್ನ ಮೈಯ.

ಓ ತಾಯೆ, ಭೂಮಿತಾಯೆ !
ದೆಯ್ಯ, ಭೂತ, ಗುಮ್ಮಯ್ಯ—
ಕತ್ತಲಾಳದಿಂದಲೆದ್ದು ಬೆದರಿಸುತಿವೆ ದಮ್ಮಯ್ಯ !
ನಿನ್ನ ಹುಟ್ಟುಹೊಲದಿ ಮತ್ತೆ
ಹುಗಿದ ಗುಟ್ಟಿನಂತೆ
ಇಟ್ಟು ತಟ್ಟು ನನ್ನ ;
ಕೊಟ್ಟ ಭಾಷೆ, ಇಟ್ಟ ವೇಷ ಕಳಚು, ಕಳಚು ಅಮ್ಮ ;
ಸಾಕು ಬಿಸಿದು ಸೋಂಕು
ಎದೆಯೊಳಿಟ್ಟವುಂಕು.

ಹರಿವ ಹೊಳೆಯು, ಮೊರೆವ ಕಡಲು
ಹಾಡುತಿರಲಿ ಲಾಲಿ—
ಮೇಲೆ ಹಸುರು ಹುಟ್ಟಿ ಬೆಳೆದು
ದಿವ್ಯಗಂಧಶಾಲಿ;
ಮೆಲಿತು ಎಲರು ಬಿಸಿದು ಗಾಳಿ ಅಲರ ಕಂಪು ಧೂಳಿ ;
ಕಾಡರೋಮಮರ್ಮರ
ಹಾಕುತಿರಲಿ ಚಾಮರ ;
ಸುರಿಯಲಮ್ಮ ನಿನ್ನ ಮೊಲೆಯ ಕುಂಭಮೇಘದಿಂದ ವಾ-
ತ್ಸಲ್ಯ ವೃಷ್ಟಿಧಾರೆ ;
ಅದರೊಳರಗಿ ಅರಿವು, ಮರೆವು ತುರುಗಿ ಮಲಗಿಯೇನು ಕಂದ,
ಜೀವನಾಧಾರೆ !

ಮುಗಿಲು ಬಾಗಿ ಕರೆಯುತಿರಲಿ ಆಚೆ,
ಕಡಲು ಕೂಗಿ ಮೊರೆದು ಕೈಯ ಚಾಚೆ,
ಕಾಮನಂಬನಾಲಂಬಿಸಿ ಹಂಬಲುಗಳ ತೊಂಗಲು
ಬಂದು ಅಂಗಲಾಚೆ,—
ಅಳಿಗಿಳಿಗಳು ಸೊಲ್ಲವು, ಹೂವು ಹಣ್ಣು ಸಲ್ಲವು ;

ಬೀಜದಲ್ಲಿ ಮಲಗಿದಶ್ವತ್ಥವೃಕ್ಷದಂತೆ
ತಾಯೆ ನಾನು ನಿನ್ನಲಿ.

ನೀನೆ ಅಲ್ಲವೇನು ನನ್ನ ಆವಿಗೆ ?
ಮುದುಡಿ ಮಲಗ ಬಂದೆ ನೋಡು ಅಲ್ಲಿ ನಿನ್ನ ಕಾವಿಗೆ.
ನಡೆದಾಡುವ ಭಾಂಡವಾಗಿ ಬಾರೆನಿನ್ನು ಬಾರೆ :
ಸಾಕು ಸಂಚಾರವು, ಅರೆ ಬೆಳಕು ವಿಹಾರವು ;
ನಿನ್ನುದಾರ ಉದರದಂಧಕಾರದಾಧಾರಕೆ
ಸೂಜಿಗಲ್ಲಿಗೋಡಿಬರುವ
ಅಯದ ರೇಣು ರೇಣು—
ಅಂತೆ ಬಂದೆ ನಾನು !

ಎರಚಿದರೇ ಮಂಕುಬೂದಿ, ಮುಚ್ಚಿತೇನು ಕಣ್ಣು ?
ಒಳಗೆಲ್ಲೋ ಕೆಂಡಜೀವ ಮುಗ್ಗುತಿರುವುದೇನು ?
ತೆರೆದು ಕಣ್ಣು ಕೆಂಡವನ್ನ ಕೆರಳಿಸಂಥ ಧೀರ
ಬರುವ ಕಾಲ ಕಾದು ಕಾದು ನೋನುತಿರುವೆಯೇನು !

ನೀನು ಕೂಡ ನನ್ನ ಹಾಗೆ ಯಾರ ಪಗಡೆದಾಳ ?
ನಿನ್ನ ಮಕ್ಕಳೆಲ್ಲ ನಿನಗೆ ಬರಿಯ ಶೋಕಮೇಳ ?
ಯಾವ ಕವಿಯ ಮನದ ಮಿಂಚಿನುಲ್ಲೋಲದ ಮೇಲೆ
ಈ ದುರಂತ ಲೀಲೆ ?
ಕಡಲಿನಲ್ಲಿ ಮೊರೆವೆಯೇನು ?
ಬಿರುವೆಲರಲಿ ಸುಯ್ವೆಯೇನು ?
ಹಸುರುತೆಂಗುಗೈಯನೆತ್ತಿ ದಿನದಿನವೂ ಮೊರೆವೆಯೇನು ?—
ಮುಗಿಲ ಸೊಗದ ಕನಸು ಇಳಿಯದಂಥ ಬಂಜೆ ಬಾಳಿಗೆ ?
ಸಡಲಿ ಬಿತ್ತೆ, ಬೀಳುತಿಹುದೆ, ನಭವ ತಬ್ಬಲೆಂದು ಮೇಲಕೆದ್ದ
ನಿನ್ನ ಬಾಹು ?
ಬರಿಯ ಬೇನೆಯಾಯಿತೇನು ನಿನ್ನ ಬಸಿರ ನೋವು ?

ಆಗ ಈಗ ಹೇಗೊ ತಾಗಿ ಬರಲು ನಭದ ವಾಣಿ
ಅದನು ಮುಟ್ಟಲೆಂದು ಮೊಳೆವ ನಿನ್ನ ಒಲವಿನೇಣಿ
ಏರುವಂತೆ ಏರಿ ಬಹರು ಬುದ್ಧ ಕ್ರಿಸ್ತಗಾಂಧಿ—
ಮತ್ತೆ ಬರಿದು ಮತ್ತೆ ಬಂಜೆ ನಿನ್ನ ಬಾಳ ಹಾದಿ.

ಇಲ್ಲಿ ನಿನ್ನ ಬಸಿರಿನಲ್ಲಿ ನಿಲ್ಲುವೆಲ್ಲ ಕುಡಿಗಳೂ
ಅಂಥ ಪುರುಷರತ್ನ ಕಲ್ಪತರುವಾಗುವ ತನಕವೂ
ತಪ್ಪದಮ್ಮ ಬೇಗೆ ನಿನ್ನ, ನಭದ ಕನಸು ಫಲಿಸದು,
ನಿನ್ನ ಬಯಕೆ ಏಣಿ ಮುಗಿಲ ಮುಟ್ಟಿ ಗಟ್ಟಿ ನೆಲಸದು.

ಏಳಲಾರೆ ಅಲ್ಲಿವರೆಗೆ ನಿನ್ನ ಬಸಿರಿನಿಂದ,
ಕನಸಿನಂತೆ, ಊಹೆಯಂತೆ ಮಲಗ ಬಂದೆ ಕಂದ.

ಓ ತಾಯೆ, ಭೂಮಿತಾಯೆ,
ದುಃಖಮಯೀ, ದುಃಖದಾಯೆ,
ನಿನ್ನ ದುಃಖಸಾಗರದಲಿ ನನ್ನ ದುಃಖಬಿಂದು
ಅರಗುವಂತೆ ಕರಗುವಂತೆ
ಚಾಚು ನಿನ್ನ ಕೈಯ,
ಬಾಚು ನನ್ನ ಮೈಯ,
ಬೆಂಕಿ ನೆಕ್ಕುವಂತೆ ನೆಯ್ಯ
ನೆಕ್ಕು ನನ್ನ ಮೈಯ.

ಓ ತಾಯೆ, ಭೂಮಿತಾಯೆ !

# ತುಂಬುದಿಂಗಳ ಬಿಂಬವೇಳುತ್ತಿದೆ

ಅಲ್ಲೊಂದು ಇಲ್ಲೊಂದು ಬರೆದು ಚೆಲ್ಲಿದ ಚೂರು
ಕಾಗದಗಳೋ ಎನಲು ಆಗಸದಲಿ
ತುಂಬಿ ತೂರಾಡುತಿವೆ ತಿಳಿಮೋಡ ನೂರಾರು ;
ನೀಲದಾಳದ ಮೌನಧ್ಯಾನದಲ್ಲಿ

ತಲ್ಲೀನ ಕವಿಯೊ ಎಂಬೊಲು ಅಲ್ಲಿ ಬೆಟ್ಟವಿದೆ;
ತಳದ ಕೆರೆ ತೆರೆದ ಮಸಿಕುಡಿಕೆಯಂತೆ;
ಅಲ್ಲಲ್ಲಿ ಬಿದ್ದ ಮಸಿಮುಸುಕೊಳಿದೆ ಹೆದ್ದಾರಿ
ಬರದೆಸೆದ ಮೊಂಡುಲೆಕ್ಕಣಿಕೆಯಂತೆ ;

ಉಭಯಸಂಕಟದ ಪಂಕದಿ ಹೂತ ಹೆಜ್ಜೆಯೆನೆ
ಏಳಲಾರದ ಗಾಳಿ ಊಳುತ್ತಿದೆ ;
ಮೊದಲ ಸಾಲಿನ ಎರಡು ನುಡಿ ಮಿಡಿದು ಅಡಗುವೊಲು
ಹಕ್ಕಿಗೊರಳದೊ ಜಿನುಗಿ ಆರುತ್ತಿದೆ.

ಮೊಳೆವ ಕಣಸನು ಚಿಂತೆ ಕವಿದು ಮುಕ್ಕಿತೊ ಎನಲು
ನಸುಬೆಳಕನಿರುಳ ಪಡೆ ಮೇಯುತ್ತಿದೆ.
ಮನ ಮಥಿಸಿ ಮೇಲೆದ್ದ ಬೆಣ್ಣೆಬಗೆಬೆರಗಂತೆ
ತುಂಬುದಿಂಗಳ ಬಿಂಬವೇಳುತ್ತಿದೆ.

# ಜೀವಸಖಿ

ತುಂಬುದಿಂಗಳೆದೆ ಹಿಳಿಯಿತು ಹಾಲನೆ,
ನೊರೆನೊರೆಯಾಯಿತು ಬಾಂದಳವು !
ಚೆಲ್ಲಿ ಚೆಲ್ಲಿ ಹರಿ ಹರಿಯಿತು ನೆಲ ಹೊದೆ
ದಿರುಳ ದಟ್ಟ ಮುಸುಕು !

ಕಂಪುಗಾಳಿ ಸುಳಿಯೊಡೆಯಿತು, ಹರಡಿತು
ಅದರ ಶಾಖೆ ಶಾಖೆ !
ಮೈ ತಂಪಾಯಿತು ಎದೆ ಉರಿ ಬೆಂಕಿಯ
ಕೊಂಡವಾಯ್ತಿದೇಕೆ ?

ಬಳಿಯ ತೆಂಗುಗರಿ ಸಲಾಕೆ ಹೊಳೆವುದು,
ಇರಿವುದು ನನ್ನೆದೆಯ,
ಬಿದ್ದ ನೆಳಲ ಕರಿದೆವ್ವ ಅವ್ವ
ಇಳಿ ಇಳಿವುದು ಎದೆಗವಿಯ.

ಹಾಡುಹಕ್ಕಿಗಳ ಗಾನನೌಕೆ ಏ
ಕೊಡೆವುದು ಎದೆತಡಿಯ
ಸೇರಿದೊಡನೆ ? ಹೆದ್ದಾರಿದೀಪವಿರ
ದಂತೆ ನನ್ನ ಹೃದಯ.

ಲೋಕವೆಲ್ಲ ಚಂದ್ರಿಕಾಲೀನ ನಾ
ಚಂದ್ರಬಿಂಬಲೀನ ;
ಎಲ್ಲಿ, ಏನು, ಇದು ? ಚಂದ್ರನೆಲ್ಲಿ ಬಾ
ನೆಲ್ಲಿ, ನನ್ನ ಧ್ಯಾನ ?

ಅಲ್ಲು ಇಲ್ಲು ಎಲ್ಲೆಲ್ಲು ಅಹಹ ನಾ
ಕಂಡೆ ಜೀವಸಖಿಯ ;
ಚಂದ್ರಬಿಂಬದೆದೆ ತುಂಬಿ ಬಂದ ಆ
ನನ್ನ ಚಂದ್ರಮುಖಿಯ,

# ನಗು ನನ್ನ ನಲ್ಲೆ !

ನಗು ನನ್ನ ನಲ್ಲೆ !
ನೀನೇಕೆ ನಗಲೊಲ್ಲೆ ?
ನಿನ್ನೆದೆಯ ನಾ ಬಲ್ಲೆ ;
ನಾಚಿಕೆಯ ಹಿಮದಲ್ಲೆ
ಹೂತು ಹೋಗಿದೆ ನಗೆಯ ಮೊಲ್ಲೆ.
ಎದೆಯ ಕಾವೇರಲಿ, ಮಂಜೆಲ್ಲ ಕರಗಲಿ ;
ನಗು ನನ್ನ ನಲ್ಲೆ.

ತುಟಿದಳವು ತೆರೆಯಲಿ,
ಹಲ್ಲ ಹೂವರಳಿ,
ಹೊರ ಬರಲಿ ನಗೆಯ ಕಂಪು ;
ನಿನ್ನ ಸಂಪಗೆ ಮೂಗು ನಸುನಸುವೆ ಕೊಂಕಲಿ ;
ನಿನ್ನ ಹಾಲ್ಗೆನ್ನೆಗಳು ತುಸುವೆ ಕೆಂಪೇರಲಿ ;
ಕಣ್ಣುಗಳ ಮೀನುಗಳು ಚಲಮಲನೆ ಚಲಿಸಲಿ ;
ಚೆಲ್ಲುತಿರಲೆಳನಗೆಯ ತಂಪು.

ನಿನ್ನ ನಗೆ ಹೊಳೆಯಾಗಿ ಹರಿದು ಬರಲಿ ;
ಅಲ್ಲಿ ನನ್ನೆದೆ ದೋಣಿ ತೇಲುತಿರಲಿ ;
ತೆರತೆರೆಯ ತಾಳಕ್ಕೆ ಕುಣಿಯುತಿರಲಿ.

ಎದೆಯ ಏರಿಳಿತಕೆ
ಕೈಬಳೆಗಳುಲಿತಕೆ,
ಬೆರಳುಗಳ ನುಲಿತಕೆ
ನಗು ನನ್ನ ನಲ್ಲೆ.

ಕತ್ತಲೆಯ ಮೊತ್ತವನು ಕೊರೆದು ಬಹ ಚಂದಿರನ
ಕಿರಣಖಡ್ಗದ ಹಾಗೆ ಬರಲಿ;
ನನ್ನೆದೆಗೆ ತಂಬೆಳಕ ತರಲಿ;
ಎಂದೆಂದಿಗೂ ಅಂತೆ ಇರಲಿ!

ಬಾಳ ಕಾಳಗದಲ್ಲಿ ನಾನು ವಿರಥ;
ಬವಣೆಗಳ ತೊತ್ತಾದುದೆನ್ನ ಚರಿತ;
ನನ್ನ ಬಾಳಿಗೆ ನಿನ್ನ ನಗೆಯೆ ದಿವ್ಯರಥ,
ನಗು ನಲ್ಲೆ, ನಗು ನೀನು ಸತತ.

# ಮುಗುದೆ ಇವಳು

ಮುಗುದೆಯಿವಳು ನನ್ನವಳು
ಏನೊಂದನು ಅರಿಯಳು !

ತನ್ನೊಲವಿನ ಸುಳಿಯಲಿ
ನನ್ನೆದೆಯನು ತೇಲಿಬಿಟ್ಟು
ನೊರೆ ಹನಿಗಳ ನಗೆಯ ತೊಟ್ಟು
ತೆರೆತೆರೆಗಳ ಮುತ್ತನಿಟ್ಟು—
ತಿಳಿಯದಂತೆ ಹರಿಯುತಿಹಳು
ಬಹುಗಭೀರವಾಹಿನಿ !

ಮೌನದ ಗಿರಿದುರ್ಗದಲ್ಲಿ
ನಿಂತದೇನೊ ಜಾನಿಸುವಳು,
ಮನದೊಳೇನೊ ಧೇನಿಸುವಳು,
ಬೆರಳನೊಮ್ಮೆ ಮಿಡಿವಳು ;
ಮಿಡಿಯೆ ಬೆರಳ ನನ್ನ ಒಡಲ
ವೀಣೆತಂತಿ ಗುಡುಗುವುದು,
ಪ್ರಲಯಾನಿಲದಬ್ಬರವನು
ಪಡುಗಡಲಿನ ಉಬ್ಬರವನು
ಹಾಡಿ ಮೊಳಗುತಿರುವುದು.

ತುಟಿಗೆ ತುಟಿಯ ಸೋಂಕಿಸದೆಯೆ
ಎದೆಗೆ ಎದೆಯ ತಾಗಿಸದೆಯೆ,
ಕಣ್ಣೆ ಕಣ್ಣ ಕೂಡಿಸದೆಯೆ,
ಎದೆಯನೆಲ್ಲ ಗೆದ್ದಳು,

ಮನವನೆಲ್ಲ ಕದ್ದಳು,
ಕನಸಿನಲ್ಲು ಸಿದ್ಧಳು!
ಮುಗುದೆ ಇವಳು ನನ್ನವಳು
ಏನೊಂದನು ಅರಿಯಳು!

# ನನ್ನವಳೀ ಹೆಣ್ಣು

ಓ, ಇವಳೀ ನನ್ನವಳೀ ಹೆಣ್ಣು !

ನನ್ನೆಳಗನಸಿನ ಹೂವಿನ ಹಣ್ಣು,
ನನ್ನೆದೆಕುರುಡಿಗೆ ಮೂಡಿದ ಕಣ್ಣು,
ತಿರಿವ ತೆರವುಬಗೆ ಬೊಗಸಗೆ ದಿವವೇ
ಸುರಿದ ಹೊನ್ನು, ಹೊನ್ನು !—ಓ, ಇವಳೀ....

ಕಂಡೆನಿವಳನದೆ ನೂರನೆ ಯಾಗ,
ಬಂದುದಂದೆ ಅಮರಾವತಿ ಭೋಗ;
ದೊರೆಯಿತೆಲ್ಲ. ಇನ್ನಿಲ್ಲ ವಿಯೋಗ;
ನಾನೆ ಯೋಗಿಯಿನ್ನು !—ಓ, ಇವಳೀ....

ಜಗವೆಲ್ಲವು ಬರಿಬೀದಿಯಾಗಿ ಬರೆ
ತೊಳಲಿ ಬಳಲಿ ಬಗೆ ಸೋತಿರೆ, ಬೀತಿರೆ,
ಯಾವ ಹುಟ್ಟಿನೊಳೊ ನಾ ಕಟ್ಟಿದ ಮನೆ
ಸೇರಿದೆನಿವಳನ್ನು !—ಓ, ಇವಳೀ....

ಇಹಪರಗಳ ಹೊಂಬೆಟ್ಟಜೋಡಿಗೆ
ನಡುವೆ ತೂಗುವೀ ಹೂವಿನ ಹಾಸಿಗೆ—
ಇದೆ ಇದೆ ಸೇತುವೆ ಇಲ್ಲಿಂದಲ್ಲಿಗೆ
ಇವಳೀ ತಾರಕಳಿನ್ನು !—ಓ, ಇವಳೀ....

# ನನ್ನ ಮೋಹದ ಮೂರ್ತಿ

ನನ್ನ ಮೋಹದ ಮೂರ್ತಿ ಉರಿದು ಹೋಗುತಲಿರಲು
ಅಲುಗಾಡದಾನು ನಿಂತೆ;
ನನ್ನ ಭಾವದ ಬೆಳೆಯ ಕಿತ್ತು ತಿನ್ನುವ ನಿಜಕೆ
ತಲೆಬಾಗಿ ನಾನು ನಿಂತೆ.

ಇಂದು ಹಾರಿತು ಮೋರೆ ಮುಸುಕು; ಘೋರೆಂದಾವ
ಬಿರುಗಾಳಿ ಬಂತೊ ಕಾಣೆ;
ಕಂಡೆನಲ್ಲಿ ಅಸಹ್ಯ ವಿಕೃತ ವಿಕಟಾನನವ
ಬೆಚ್ಚಿದೆನು ನನಗೆ ನಾನೆ!

ಸುಂದರ ಸುಪುಷ್ಟ ಮಾಂಸದ ಸೊಬಗಿನೇರುಗಳ
ತಗ್ಗುಗಳ ಹಿಗ್ಗುಗಳ ಚೆಲುವು
ಇಂದೆಲ್ಲಿ? ಕಠಿನ ಕರ್ಕಶ ಕೃಶಕಲೇವರವು
ಕಣ್ಣನಿರಿವ ಕಠಾರಿಯಲಗು!

ವೇದನೆಯು ಕುದಿಯುವೆದೆಯಲ್ಲವಿದು; ಕಾಯಿಸಿದ
ಕಬ್ಬಿಣವ ಕೆಮ್ಮೈಯ ಮಾಯೆ;
ಹೂವಲ್ಲ, ದೀಪ ಶಿಖೆ; ಬಾಳಲ್ಲ, ಬಾಳ ಹಗೆ;
ಒಲವಿನಮೃತವ ಸುರಿವ ಬಾಯೆ
ಹಾಲಾಹಲದ ತಾಯಿ ಎಂಬರಿವು ಬಿರುಗಾಳಿ
ಬಂದು ಮಗುಚಿತು ಒಲವು ನಾವೆ!

✓ಒಡೆದ ಕೊಡದಲ್ಲಿ ತುಂಬಿದೆನು ನನ್ನೆದೆಯೊಲವ,
ದಿನನಿಶಿಯು ಬೇರಿಲ್ಲ ಬೆಸನ.
ಕೊನೆಗೆ ತೆರೆಯಿತು ಕಣ್ಣು ಒಡಕು ಮಡಕೆಯ ಪಸಿಗೆ;
ಅಲ್ಲವಿದು, ಅಲ್ಲ ಹಾ! ಅಮೃತ ಕುಂಭ.

ಕುಟ್ಟಿಯೊಡೆದೆನು ಕೊಡವ ; ಚೂರು ಚೂರಿನ ಮೇಲೆ
ನಡಸಿದೆನು ಉನ್ಮತ್ತಲೀಲೆ ;
ಎದೆಯು ಸೋಲಿಗೆ ನಾಚಿ ಕೂಗಿದೆನು, ರೇಗಿದೆನು ;
ಗುಡುಗಿನಾಟವು ಮುಗಿದ ಮೇಲೆ

ಸುರಿಯುವೊಲು ಮಳೆ ನಾನು ಸುರಿಸಿ ಬಿಸುಗಂಬನಿಯ
ತಣ್ಣಗಾದೆನು, ವಿಜಲ ಜಲದ
ಬೆಳರುವೊಲು ಬೆಳರಿದೆನು ; ತುಣುಕಾಗಿ ತೂರಿದೆನು
ಹಾರಿದೆನು ಹರಿದಂತದನಕ !

ಮೈಯ ಮರೆಯಿಸುವೊಲವು ಒಲವಲ್ಲ ; ಅದು ಸೆಳವು !
ನಂಬಿದರೆ ನೆಲೆ ರಸಾಳತಳವು.
ಅರಿವನರಿಯದ ಒಲವೆ ಮಾನಸಸರೋವರವು \
ವಿಹರಿಸಲು ಬೇಕಯ್ಯ ಪುಣ್ಯಬಲವು !

# ಒಡೆದು ಬಿದ್ದ ಕೊಳಲು

ಒಡೆದು ಬಿದ್ದ ಕೊಳಲು ನಾನು,
ನಾದ ಬರದು ನನ್ನಲಿ;
ವಿನೋದವಿರದು ನನ್ನಲಿ.

ಕಿವಿಯನೇಕೆ ತೆರೆಯುತಿರುವೆ ?
ಎದೆಯೊಳೇನ ಬಯಸುತಿರುವೆ ?
ದೊರೆಯದೇನೂ ನನ್ನಲಿ !

ನಲ್ಲೆ ಬಂದು ತುಟಿಗೆ ಕೊಳಲ-
ನೊತ್ತಿ ಉಸುರ ಬಿಟ್ಟಳು ;
ತನ್ನ ಒಲವಿನಿಂದ್ರಧನುವ
ಹರಿದು ಹಿಳಿದು ಬಿಟ್ಟಳು ;
ಬಣ್ಣ ಬಣ್ಣದೆನಿತೊ ಹಾಡ-
ನಿಲ್ಲಿ ಚೆಲ್ಲಿ ಕೊಟ್ಟಳು.

ಹಾಡಿ ಹಾಡಿ ಬೇಸರಾಗಿ
ನೆಲಕೆಸೆದಳು ಕೊಳಲನು ;
ಇಂದು ಮೌನದುಸುಬಿನಲ್ಲಿ
ಹುಗಿದಳೆನ್ನ ಮನವನು.

ಕೊಳಲು ಬೇಸರಾಯಿತೇನೊ,
ಹೊಸ ಹಂಬಲು ಹಾಯಿತೇನೊ,
ಎದೆಯ ಗಾಯ ಮಾಯಿತೇನೊ
ಬಿಸುಟಿದ್ದಳು ಕೊಳಲನು.

ಕಂಪುಗಾಳಿ ಅಲೆ ಅಲೆ
ತೇಲಿ ಬರಲು ಮಲೆ ಮಲೆ
ಬಿದಿರ ಕೊಳಲ ಮಾಡಿ ಹಾಡಿ
ತೂಗುತಿರಲು ಹೊಂದಲೆ

ಒಡೆದ ಕೊಳಲ ಪಾಡನೋಡು :
ಇನ್ನೆಲ್ಲಿದೆ ಸುಗ್ಗಿ ಎಂದು
ಮಣ್ಣಿನಂತೆ ಮಲಗಿತು.
ಮುಗ್ಗಿ ಮುರುಟಿ ನಲುಗಿತು.

ಸನ ಯಮುನಾತೀರದಲ್ಲಿ
ಕುಣಿದು ಬರೆ ಸಮೀರನು,
ನೆಳಲಿನಿಂದಲೆದ್ದು ಬರಲು
ಗೋಪಗೋಪಿಕೆಯರು,
ಒಡೆದು ಬಿದ್ದ ಕೊಳಲ ಕೊಳಲು
ಬರುವನೊಬ್ಬ ಧೀರನು.
ಅಲ್ಲಿವರೆಗೆ ಮೃಣ್ಮಯು,
ಬಳಿಕ ನಾನು ಚಿನ್ಮಯು !

# ಹನ್ನೆರಡು ವರುಷಗಳು

ಹನ್ನೆರಡು ವರುಷಗಳ ದಟ್ಟ ತೆರೆಯಾಚೆಕಡೆ
ನಿಂತೇಕೆ ನೀ ನನ್ನ ಕೆಣಕುತಿರುವೆ?
ತೆರೆಯೆಳೆದು ಬಿಟ್ಟು ಹೊಸ ನಾಟಕದಿ ವೈಮರೆತ
ನಟನನೇಕೌ ಹಿಡಿದು ನಿಲಿಸುತಿರುವೆ?

ಅಂದು ಹರೆಯುದ ಮೊದಲಿನುಲ್ಲಾಸವೆದೆ ಕದವ
ತೆರೆದು ಸೇರಿದೆಯೋ ತಳಾತಳವನು;
ಈಗ ಎಲ್ಲೆಲ್ಲಿ ಬಿರುಕಲ್ಲಲ್ಲಿ ಕಾರಂಜಿ
ಬೆಂಕಿ ಧಾರೆಯನೆತ್ತಿ ಚಿಮ್ಮುತಿಹೆಯೋ—

ಇದ್ದಕಿದ್ದಂತೆ ಹದ್ದೆರಗಿ ಬರೆ ಹಾವಂತೆ
ನಿನ್ನ ನೆನಪೆರಗಿ ಮನ ಮರುಗುತಿಹುದು.
ಮಿಡುಕುವೆನು, ಹುಡುಕುವೆನು, ಎದೆಹಕ್ಕಿ ತಡಕುವೆನು;
ಎಲ್ಲಿ? ಏನಿದು? ಏಕೆ? ಇಂಥ ದಿಗಿಲು!

ಒಂದೆ ಒಂದೌಷಧವು ಜಗದೆಲ್ಲ ಕೊರಗಿಗೂ—
ಮರವೆ. ಅದ ತಂದಿಲ್ಲಿ ನೆಡುತಲಿರುವೆ;
ಮರಮರದ ಕೊನೆಕೊನೆಗು ನಿನ್ನ ನೆನಪಿನ ನನೆಯೆ!
ಮರೆಯಲಾರೆನು, ಅಯ್ಯೊ, ಮರೆಯಲಾರೆ!

# ಹೆಣ್ಣು : ೧

ಇಹರು ಹೆಗ್ಗಡಲ ತಳಕೂ ಮುಳುಗಿ ಬಂದವರು,
ಪಾತಾಳದಾಳಕೂ ಇಳಿದ ಭಟರು;
ಹೆಣ್ಣು, ಈ ಬರಿ ಹೆಣ್ಣು ಎದೆಗಡಲ ಪೇರಾಳ
ಕಂಡ ಕಲಿಗಳು ಮಾತ್ರ ಕಂಡರಿಲ್ಲ.

ಕಿರುದೆರೆಯು ಸರಸ, ಜಲಕಣಗಣದ ಕಲಕು ನಗೆ,
ಕೆಳಬಂಡೆ ಸುಳಿಯು ಪೊಂಪುಳಿಯು ಹೂಟ;
ಬಿಗಿಹಿಡಿದ ನಗೆನೊರೆಯು ಒಯ್ಯಾರ; ತುಯ್ಯುವೆದೆ
ಹಡಗು ಹಡಗನು ಕರೆವ ಕೊಂಕು ನೋಟ.

ಆಗ ತಂಗಾಳಿ ಜೋಕಾಲಿ; ಮರ್ಮರ ಲಾಲಿ;
ತುಂತುರಿನ ತೆರೆಮುರಿಯು ಬೆರಳಿನಾಟ;
ತಿಳಿನೀಲಿ ರೇಸಿಮೆಯ ಸೆರಗೆತ್ತಿ ಇಳಿಬಿಡುವ,
ಉಬ್ಬಿ ತಗ್ಗುವ, ತಬ್ಬಿ ಬರುವ ಬೇಟ.

ಬಳಿಕ ಬಲ್ದೆರೆ ಮೊರೆಯು ರೋಷ ಭೀಷಣ ಘೋಷ;
ಹುಬ್ಬುಗಂಟನು ಬಿಗಿವ ಮಾರಿನೋಟ;
ಕೆಳಬಂಡೆ ಸುಳಿ ಸೆಳವು ಎಲ್ಲ ಹೆಬ್ಬುಲಿ ಬಾಯಿ,
ಹಡಗು ಬುಗುರಿಗೆ ದಾರ ಬಿಗಿಯುವಾಟ.

ಆಗ ಬಿರುಗಾಳಿ ಗಣೆಮಿಣಿಯಾಟ; ಬುರುಗುನೊರೆ
ಕುದಿವ, ಊದುವ, ಮಿದಿವ ಕಾಲಕೂಟ;
ನೀಳ್ದನಿಯ, ಸುಯ್ದನಿಯ, ಹೊಯ್ದೆರೆಯ ದೆಯ್ಯವ್ವೆ,
ವಜ್ರಬಂಧದಿ ಕತ್ತು ಕಿವುಚುವಾಟ.

ನೂರು ಹೆಗ್ಗುರಿಗಳನು ಹುಗಿದ ಹೆಗ್ಗೋರಿ ಇದು,
ಹೆಣ್ಣು ಜೀವದ ಆಧಿ, ಸಾವಿನಾದಿ;
ಇಲ್ಲಿ ಈ ಹಡಗು ಹಿಡಿದಲೆದು, ಅಲೆಯುತ್ತಲಿರೆ
ಜಲಸಮಾಧಿಯ ಅವಧಿ ನನ್ನ ಪರಿಧಿ.

## ಹೆಣ್ಣು : ೨

ಹೊನ್ನ ಪಂಜರ : ಅಲ್ಲಿ ಒಳ ಹೊರಗು ಕಿಂಕಾಪು
ರೇಸಿಮೆಯ ತುಪ್ಪುಳಿನ ಮೆತ್ತೆ ಮೆತ್ತೆ ;
ಚಂದ್ರಿಕೆ, ಚಕೋರ, ಅಪ್ಸರೆ, ಅಮೃತ, ಮಂದಾರ
ಗಂಧ, ಕೋಕಿಲಗಾನ, ಮಂದಾನಿಲ.

ಅಲ್ಲಿ ಬಯಕೆಸಲಾಕೆ ಮೇಲೆ ತೇಲುವ ಹೆಣ್ಣು
ಕಣ್ಣು ಕೊರೆಕರೆ ಮಾಯೆಗನ್ನಡಿಯಲಿ
ತೆರೆತೆರೆವ ಸರಿವ ಹೊಸ ಹೊಸ ಲೋಕಲಾಳಿಯಲಿ
ಇಂದ್ರಜಾಲದ ಮಿಂಚುದಾರಗಳಲಿ

ನನ್ನೆದೆಯ ಎಳೆ ಎಳೆಯು ಹೊಸೆದು ಕಸೆಗೊಳ್ಳುತಿರೆ
ಜೇನುಕ್ಕಿ ಹರಿವ ಹೂರೆಕ್ಕೆ ಚಾಚಿ
ಹಾರಲೊಲ್ಲದ ಹಕ್ಕಿ ಹಾರಗಲಿಸಿತು ನನಗೆ ;
ಏರಿದರೆ ಎಳೆಯುತಿದೆ ತನ್ನ ತಳಕೆ.

ಕಿರಿದು ಇದು ಈ ನನ್ನ ಲೋಕ ಹೊರನೋಟಕ್ಕೆ
ಹೆಜ್ಜೆಯಿಡಲಡಿಗೊಂದು ಹೆಜ್ಜೆಯಂತೆ
ಬಿಚ್ಚುತಿದೆ ಈ ಮಂತ್ರರತ್ನಗಂಬಳಿ ಸುರುಳಿ,
ಸೂಜಿಗಲ್ಲಂಚು ಕರೆದೋಡುತ್ತಿದೆ.

ಋತು ಋತುವಿನಾನಂದ ತಂತ್ರಿಗಳು ಝೇಂಕರಿಪ
ಚಿರಚೈತ್ರವಲ್ಲಕಿಯ ಕಲ್ಲೋಲಕೆ
ಹೆಜ್ಜೆಹೆಜ್ಜೆಗು ಎದ್ದು ನಿಲ್ಲುವ ನಲಿವ ಚೆಲುವ
ಚಪ್ಪರಿಸಲೂ ಸಾಕೆ ನೂರು ಜನ್ಮ ?

ಹೊರಗೆ ಬಿರುಗಾಳಿ ಮಳೆ ದಾಳಿ, ಸಾವಿನ ಹುತ್ತ
ಹುತ್ತ ; ಭಯಕಾಳಾಹಿ ಹೆಡೆಯಾಟವು.

ಅಭಯ ಗಾರುಡರಕ್ಷೆ ಇಲ್ಲಿ; ಮಲ್ಲಿಗೆ ಜಾಜಿ
ಸಂಪಗೆಯ ಕಂಪೊಗೆವ ಮೋಹಬೇಲಿ.

ಹೊರಗೆ ನೀಲಾಕಾಶ, ಮುಗಿಲು, ತೊರೆ, ತೆರೆ, ಕಾನು,
ಹಿಮಗಿರಿಯ ಕಂದರದ ಧವಳಹಾಸ;
ಕೇಳುವುದು ದೂರತೀರದ ಮರ್ಮರಾಲಾಪ—
ಈ ಪಂಜರಕು ನನಗು ವಜ್ರಲೇಪ!

# ಒಲವು

ಕಣ್ಣೊಳಾಡಿದ ನಿನ್ನ ತನು ರೂಪುವಡೆದೀಗ
ನಿಲಬಾರದೇ? ಕಣ್ಣ ಹೊಲವಾಗದೆ?
ಎನಿತೆನಿತು ನೆನೆದರೂ ಕಾಣಬಾರದೆ ಈಗ,
ಮೂಡಬಾರದೆ ಮನದ ಮೂಡಲಲ್ಲಿ?

ಮಂಜುತೆರೆಯಾಚೆ ನರುಗಂಪುಲಿವ ಮಂದಾರ-
ದಂತೆವೊಲು, ಹಾ, ನಿನ್ನ ಮಸಕುರೂಪು.
ಹೊಗೆ ಸುತ್ತಿ ಸುಳಿಯುತಿರೆ ಅದರಾಳದೊಳಗೆಲ್ಲೊ
ಬೀತ ಕಿಡಿಯೊಲು ಹೂತ ಮಾಸುನೆನಪು.

ನಿನ್ನ ಬಳಿಯಿರೆ ಬಳ್ಳಿವರಿದೊಲವು ಮಳೆಬಿಲ್ಲು
ಈ ನೆಲಕೆ ಆ ಮುಗಿಲ ಬೆಸೆಯುತಿತ್ತು,
ಎಂತಿತ್ತು ನಿನ್ನ ಮೊಗ? ಎಂತು ಎದೆ, ತುಟಿ, ತೊಡೆಯು?
ಅತ್ತರೂ ನೆನಪು ತಲೆಯೆತ್ತದಲ್ಲ!

ನೋಡಿದೆನು ದಿನದಿನವು, ನೋಡುತಿರೆ ಸದ್ದಿಲ್ಲ-
ದೊಲವು ಜೋಗುಳಕೆ ಮೈಮರೆಯುತಿತ್ತು;
ಬೆಳಕು ಬೆಳಕನು ಕೂಡಿ ಆಡುತಿರೆ ಬಲ್ಪು ಹೊರೆ;
ಈಗ ಬಲ್ಪಿಗೆ ಬಲ್ಪು ಕಾತರಿಸಿತು.

# ಎಂಥ ಕಣ್ಣು !

ಎಂಥ ಕಣ್ಣು, ಎಂಥ ಕಣ್ಣು,
ಎಂಥ ಕಣ್ಣು ನಿನ್ನದೆ!
ಅದರ ಹೊಳಹಿನೆಳೆಗಳಲ್ಲಿ
ಜೋಲುತಿಹುದು ನನ್ನೆದೆ,
ಅದರ ಕಳೆಯ ಕಡಲಿನಲ್ಲಿ
ತೇಲುತಿಹುದು ನನ್ನೆದೆ.

ಹಿಮದ ಧವಳತೆಯೊಳು ತೊಳಗು-
ವೆರಡು ನೀಲಮಣಿಗಳೆ,
ಕಮಲಗರ್ಭದಿಂದಲಿಣುಕು-
ತಿರುವ ತುಂಬಿ ಮರಿಗಳೆ,
ಒಡಲ ಕಡೆಹದಿಂದ ಬಂದ
ಅಮೃತದೆರಡು ಹನಿಗಳೆ,
ಒಲವಿನೊಳಗು ನುಡಿಗಳೆನಿತೊ
ತಳೆದ ಹೊನ್ನ ಗಣಿಗಳೆ?

ಎಂಥ ಕಣ್ಣು, ಎಂಥ ಕಣ್ಣು,
ಎಂಥ ಕಣ್ಣು ನಿನ್ನದೆ!
ಅದರ ನೆನಹುನಾಡಿನಲ್ಲಿ
ತಿರುಗುತಿಹುದು ನನ್ನೆದೆ!

# ತರಳೆ

ಇನ್ನು ಇನ್ನೂ ನೀನು ಪುಟ್ಟ ಮುಗುವೆಳತರಳೆ,
ಭುವಿಯನಾವರಿಸಿರುವ ಬೆಳುದಿಂಗಳೇ!
ಬಚ್ಚಲಾದರೆ ಏನು, ಕೊಚ್ಚೆಯಾದರೆ ಏನು?
ಎಲ್ಲೆಲ್ಲು ಹರಡೀತು ಅದರ ಮಧುವೇ.

ನೀನು ನಗುವಿನ ಬುಗ್ಗೆ; ಜೇನಿರುವ ಕಡೆ ಲಗ್ಗೆ
ಹಾಕಿ ಬರುವುವು ಮಧುಪ, ಏನಚ್ಚರಿ?
ಇದು ಒಲವೊ, ಇದು ನಲವೊ, ಇದು ಯಾರ ಹಂಬಲವೊ,—
ತಿಳಿಯದೆಯೆ ಮೊರೆಯುತಿದೆ ಕಾಮಲಹರಿ.

ನೀನಲ್ಲಿ ಕರಗುವೆಯೊ, ಮರಳಿನೊಲು ಮರುಗುವೆಯೊ,
ಬಂಡೆಯೊಲು ತಲೆಯೆತ್ತಿ ನಿಲ್ಲಲಿಹೆಯೋ;
ಅರಿಯೆನರಿಯೆನು ತರಳೆ; ಬಲ್ಲೆ ನಾನಿನಿತನ್ನು—
ನಿನ್ನಿಂದ ತಣಿದೀತು ಜೀವ ಹಲವು.

ನೋಟನೋಟಗಳೇಟಿಯಂತೆ ತಿವಿದರು ಕೂಡ
ಕ್ಷತವಾಗದಿರು ನನ್ನ ಬೆಳುದಿಂಗಳೇ;
ಮಾತುಮಾತಿನ ಕೆಸರನೆಸೆದರೂ ಕಲಕದಿರು
ಗಂಗಾತರಂಗಮಾಯ ಹೃದ್ರಂಗಳೇ!

# ನಿಜವ ನುಡಿ!

ನಿಜವ ನುಡಿ, ನುಡಿ ದಿಟವ, ಮರೆಸದಿರು ಒಂದನೂ ;
  ಮಾತುಗಳ ತೆರೆಮರೆಯ ತೆರೆದು ತೋರೆದೆಯನು.

ನಿನ್ನ ನುಡಿ ನನ್ನೆದೆಯ ಬೇರುಗಳ ಕೀಳುತಿದೆ,
  ಹೋಳುತಿದೆ ನಂಬುಗೆಯ ಬಿಂಬಗಳನು ;
ಹೇಳುತಿದೆ : ಬಂದ ಈ ಬೆಳೆಯೆಲ್ಲ ಕಳೆ ಎಂದು ;
  ತಾಳುತಿದೆ ವಿಷಮ ವಿಷರೂಪಗಳನು.

ಸಟೆಯ ಹೊಲೆಗೆಡೆಯಿಲ್ಲ ನಿನ್ನೆದೆಯ ಗಂಗೆಯಲಿ ;
  ಬಲ್ಲೆನಯ್ಯೋ, ಅದನು ಬಲ್ಲೆ ಬಲ್ಲೆ!
ಆದರ್ಶಗಳ ತುಮುಲದಲ್ಲಿ ಭಾವಾಂತರದ
  ಕೆನ್ನೀರ ಮುನ್ನೀರಿನಾಳದಲ್ಲಿ
ಮುಳುಗಿ ನಲುಗಿದೆ ಮೂಲವೃತ್ತಿಬಿಂಬಗಳಹೋ,
  ದಿಗ್ಭ್ರಾಂತೆ ನೀನಿಂತು ನುಡಿವೆ ತರುಣಿ!

ಕಡಲಿನಲಿ ಬೆರೆತಿಲ್ಲ, ಬೆರವಾಸೆ ನನಗಿಲ್ಲ
  ಎಂದು ತೊರೆ ಮೊರೆಯುತಿರಲು ;
ದುಂಬಿಯಲಿ ಮನವಿಲ್ಲ, ಅದರೊಲವು ನನಗಲ್ಲ
  ಎಂದು ಹೂ ಹೇಳುತಿರಲು ;
ಬಾನಿನಲಿ ನಲವಿಲ್ಲ, ನನಗಲ್ಲಿ ನೆಲೆಯಿಲ್ಲ—
  ಮುಗಿಲಿಂತು ಮೊಳಗುತಿರಲು ;
ದಿನದಿನವು ನೆಲವ ಬಿಗಿದಪ್ಪಿ ಮುದ್ದಿಸಿದರೂ
  ಒಲವಿಲ್ಲ ಎನಲು ಕಡಲು—
ನಂಬಲೆಂತು—ಅದನು—ನಂಬಲೆಂತು ?

ಮನದ ತೆರೆಯೋಳಿಯಲಿ ಬುದ್ಧಿ ರಚಿಸುವ ಕಾಮ-
ನಂಬನ್ನು ತೋರಬೇಡ;
ಅಲ್ಲಿ ಬೀಸುವ ಘೋರ ನಿಶ್ಚಯ ಸಮೀರವನೆ
ನೋಡೆಂದು ಹೇಳಬೇಡ!
ಎದೆಗಡಲಿನಾಳದಲಿ, ಆ ಮಹಾಕಾಳದಲಿ
ಹುದುಗಿರುವ ಸತ್ಯವನ್ನು;
ಭಾವನದಿ ಮೂಲದಲಿ, ಆ ಚಿಲುಮೆಯಾಳದಲಿ
ಸ್ಪಂದಿಸುವ ನಿತ್ಯವನ್ನು
ತೆರೆದು ತೋರೆಲೆ ದೇವಿ, ಕಳೆದೊಲವಿಗಾಗಿ,
ಬಂದು ಬಾರದ ನೂರು ನಲವುಗಳಿಗಾಗಿ.

ಬಳಿಕ ನೀನಿಟ್ಟ ಗೆರೆ ನನ್ನ ಬಾಳ್ನೆಲದ ಕರೆ;
ನೀ ತೊಟ್ಟ ನವವೇಷ ನನ್ನ ಸುಖ ಸಂತೋಷ!
ನೀ ನುಡಿದ ನುಡಿ ನನ್ನ ಹಂಬಲಂಬರದ ಗಡಿ;
ಇಲ್ಲವಾದರೆ ಬಾಳು ಸಾವಿನಡಿಯಡಿಯ ಹುಡಿ.

# ತಂಗಿ

ಒಡಹುಟ್ಟಿದವಳು ನೀನಲ್ಲವಾದರು ನನ್ನ
ಬಗೆ ಮುಗುಳಿನ ಬಳಿ ಬೆಳೆದವಳು;
ನಲುಮೆಗೈಯನು ಮೃದುಮೃದುವಾಗಿ ಸೋಂಕಿಸಿ
ಮುಗಿದ ನನ್ನೆದೆಕದ ತೆರೆದವಳು.

ಮನೆಮಠಗಳ ಬಿಟ್ಟು ಜೀವನವಾಹಿನಿ
ಸೆಳೆದತ್ತ ಸೆರೆಯಾಗಿ ಸಾಗುತಿರೆ,
ಬೆನ್ನುಬೆನ್ನಿಗೆ ಬಂದು ಸಂತವಿಡುವ ಮಂದ
ಮಾರುತನಂತಿರೆ ನೀ ದೊರೆತೆ!

ಕಣ್ಣೀರ ಮುನ್ನೀರ ಹರಿಗೋಲು ನಿನ್ನೆದೆ;
ನನ್ನನು ಅದರೊಳು ಕೂರಿಸಿದೆ;
ಬನ್ನ ಬೇಗುದಿಗಳ ತೆರೆಗಳ ಮಧ್ಯದ
ನನ್ನೊಡಲಿನ ಭೀತಿ ವಾರಿಸಿದೆ.

ಸಂಜೆ ಹೊಂಜೆರಗನು ಮರೆಗೊಂಡ ತಾರಗೆ
ಮುಂಜಾವವನು ನಸು ಮರೆಯುವೊಲು
ತಂಗಿ! ನಿನ್ನೆದೆ ಬಳಿ ಬಂದು ನಿಂದರೆ ಬಗೆ
ಜಗದೆಲ್ಲ ಹಗೆಯನು ಮರೆಯುವುದು.

ಮುಂಜಾವವರಳುವ ಹೊಸ ಹೂವಿನಂದದಿ
ರಂಜಿಸುತಿಹುದಮ್ಮ ನಿನ್ನೆದೆಯು
ಅಂಜುತ ಅಳುಕುತ ಬಳಿ ಬಂದು ನೆಲೆಸಿಂದು
ಮಂಜಿನ ಮಣಿಯವೊಲಲುಗುವೆನು!

# ಮಾನವ ಹೃದಯವು

ಮಾನವ ಹೃದಯವು ಕಲ್ಲೋ ಕಲ್ಲು,
ಹೆಣ್ಣು ಹೃದಯವೋ ಕಲ್ಲಿಗು ಕಲ್ಲು!
ಪ್ರೀತಿಯೆಂಬುದದು ಹೊರಮೈಬಣ್ಣ;
ಒಳಗೆ ಕಠಿನ ಕರ್ಕಶವೋ ಅಣ್ಣ,
ಬರಿಯ ಕಲ್ಲು ಕಲ್ಲು!

ಕೇಳು, ಕೇಳು, ಕೇಳು;
ಕಿವಿಯ ಕೊರೆಯುವೀ ನಿಜವ ಕೇಳು, ಓ
ಮೂರ್ಖ ಮುಗ್ಧ ಬಾಲ!
ಬೇಕಾಗುವ ವರೆಗೊಲವೂ ವಲವೂ
ನೇಹಮೋಹ ಜಾಲ;
ಮಾತು ಜೇನು; ನಡೆನಿಲುವು ನಾಟ್ಯ;
ಬಾಳೆಲ್ಲ ಬೇಟಗಾಳ!

ಬೇಡವಾದರೀ ನಿನ್ನ ಹೃದಯ ಕೊಳೆ
ಕಸಕು ಕೀಳು, ಕೀಳು!
ಒಲಿದ ಹೃದಯವೇ ಆಗ ಮಾಡುವುದು
ಅದನು ಮೆಟ್ಟುಗಲ್ಲು!

ಹೂವೆದೆ ಶಾಪವ ಕೊಂಡು ಹುಟ್ಟಿದೆಯ?
ಅದನು ಕೊಲ್ಲು ಕೊಲ್ಲು;
ಈಗಲೀಗಲೇ ಕಿತ್ತು ಬಿಸುಡು, ಬಹು
ದೂರ ಎತ್ತಿ ಚೆಲ್ಲು!

ಇಲ್ಲವಾದರೆದೆ ಬೆಂಕಿಯಲ್ಲಿ ಬಾ-
ಳೆಲ್ಲ ಸುಟ್ಟು ಕರಗು;
ಕಲ್ಲುಕಲ್ಲಿಗೂ ತಾಗಿ ತಾಗಿ ಚೂ-
ರಾಗಿ ನಿನ್ನ ಕರುಳು!

# ನನ್ನ ನಿನ್ನ ಲೋಕ

೧

ನನ್ನ ನಿನ್ನ ಲೋಕವೊಂದು ಬೇರೆಯೊಂದು ಇದ್ದರೆ
ನನ್ನ ನಿನ್ನ ಜೀವವೆರಡು ಈ ಭವವ ಗೆದ್ದರೆ
ತನುವ ತೆರೆಯು ಕರಗಿ ಶುದ್ಧಮನವು ಮೇಲಕೆದ್ದರೆ
ಏನು ಗಾಡಿ ಏನು ಮೋಡಿಯಿಂದ ಬಾಳುತಿದ್ದೆವೆ!

ಒಲವೊಂದನೆ ಬಿತ್ತಿ ಬೆಳೆದು
ನಲವೊಂದನೆ ತುತ್ತುವಡೆದು
ಚೆಲುವೊಂದನೆ ಹೊತ್ತು ಹಡೆದು
ಹೇಗೆ ಹಿಗ್ಗುತಿದ್ದೆವೆ,
ಹೇಗೆ ಹಿಗ್ಗುತಿದ್ದೆವು!

೨

ನೀನು ಸಖಿ, ನಾನು ಸಖ; ನಿನ್ನ ಸುಖವೆ ನನ್ನ ಸುಖ;
ಬರಲಿ ನಾಕ, ಬರಲಿ ನರಕ—ನಮ್ಮ ಗಮನಕೊಂದೆ ಮುಖ;
ಮನಮನವೂ ಎರಕದೆಸಕ, ಭಾವ ಜೀವ ಏಕ ಏಕ
ಎಂದು ಬಾಳುತಿದ್ದೆವು;
ಅಲ್ಲಿ ಇಲ್ಲಿ ಹಾಗೆ ಹೀಗೆ ನಾವು ತಿರುಗುತಿದ್ದೆವು!

೩

ದೂರ ದೂರ ಬಾನು ಬಾಗಿ ಬುವಿಗೆ ಮುದ್ದನಿಡುವೆಡೆ;
ಹಾರಿ ಬಂದು ಮುಗಿಲ ಹಿಂಡು ಗಿರಿಯ ತಬ್ಬುತಿರುವೆಡೆ;
ಅಲ್ಲಿ ಹುಲ್ಲೆ, ಇಲ್ಲಿ ಜಿಂಕೆ ಜಿಗಿದು ನೆಗೆದು ನಲಿವಡೆ

ಎಲ್ಲಿ ಬಳ್ಳಿ ಬಾಗಿ ಬಾಗಿ
ಹೊನಲ ಕನ್ನಡಿಯಲಿ ನೋಡಿ

ತನ್ನ ಸೊಬಗಿಗಾಗಿ ತಾನೆ
ಬೀಗುತಿರುವುದೋ ;
ಬೀಗಿ ನಿಂತು ಬಿಂಕದಿಂದ
ಹೂವು ತುಟಿಗಳನ್ನು ತೆರೆದು
ನಗುತಲಿರುವುದೋ ;

ಎಲ್ಲಿ ಹರಿವ ಮೊರೆವ ಹೊನಲು
ಬಳಿಯ ಬಳ್ಳಿ ಗಿಡಮರಕ್ಕೆ
ತನ್ನ ಎದೆಯ ಪಾಡನೆಲ್ಲ
ತೋಡಿ ಹೇಳುತಿರುವುದೋ ;
ಎಲ್ಲಿ ಹಕ್ಕಿ ಗಿಡಗಿಡದಲಿ
ತಳುವಿ, ತಳುವಿ ಎದೆಗಡಲಲಿ
ನೆಗೆವ ಭಾವವೀಚಿಗಳನು
ಮೊಗೆಯುತಿರುವುದೊ ;

ಅಲ್ಲಿನೊಂದು ಕಂದರದಲಿ, ಬಳ್ಳಿ ಸಮೆದ ಹಂದರದಲಿ
ಅಲ್ಲಿ ರವಿಯ ಕಿರಣ ತಳಿರಿನಲ್ಲಿ ಸೋಸಿ ಬರುತಿರೆ,
ಗಂಧರ್ವಗಾನಲಹರಿ ಎಲರೊಳೀಸಿ ಬರುತಿರೆ ;

ಜಗಕೆ ಜನಕೆ ಬಹಳ ದೂರ,
ಹಗೆಯ ಹೊಗೆಗೆ ದೂರ ದೂರ,
ಸಣ್ಣತನದ ಕೊರಗು, ಮರುಗು
ನಮ್ಮ ಬಳಿಗು ಸುಳಿಯದಿರಲು ;
ಅಲ್ಲಿ ನಾವು ನಿರ್ವಿಕಲ್ಪ
ಸುಖದ ವಿಮಲ ಕುಸುಮತಲ್ಪ—
ಅದೊರೊಳೊರಗಿ ಕಲ್ಪ ಕಲ್ಪ
ಮರೆತು ಸಾಗುತಿದ್ದೆವು ;

ಕನಸುನಾಡಿದಲ್ಲಿ ಹಾಗೆ
ತಿರುಗುತಿದ್ದೆವು!
—ನನ್ನ ನಿನ್ನ ಲೋಕವೊಂದು ಬೇರೆಯೊಂದು ಇದ್ದರೆ,
ಬೇರದೊಂದು ಇದ್ದರೆ!

# ಒಂದು ಕಾಗದ

ಇದು ಪದ್ಯವೋ ಗದ್ಯವೋ ತಿಳಿಯೆ ; ಲೆಕ್ಕಿಸೆನು ;
ಕರಗಿ ಭೋರ್ಗರೆಯುತಿರುವೆದೆ ಹುಚ್ಚು ತೊರೆಯ ಮೊರೆ
ಇದು ; ಕೊರಗು ಕೊರೆಕೊರೆವ ಕರುಳಿನಿಂದೊಗೆದು ಬರು-
ವಾಕ್ರಂದನಚ್ಛಾಯೆ ; ಕುದಕುದಿದು ಬಾಳೆಲ್ಲ
ಉಗೆಯಾಗಿ ನೆಗೆಯುತಿರೆ ತಣಿದೆರಡು ಹನಿಗಳಿವು.
ಉಲ್ಲೋಲ ಕಲ್ಲೋಲ ಜೀವನಾಂಬೋನಿಧಿಯ
ರುದ್ರತಾಂಡವದ ತೊತ್ತಳದುಳಿತ ಕಾಳಾಗಿ
ಹೊಯ್ದಾಡುತಿರುವ ಎದೆ ದೋಣಿಯಾಕ್ರೋಶವಿದು :
ತಿಳಿದೀಯೆ ಇದರ ನುಡಿನುಡಿಯನೂ ; ನುಡಿಗಳೊಳ
ನಾಡಿಯಲಿ ಮಿಡಿವ ಪ್ರೇಮೋನ್ಮಾದ ಜೀವನದ
ಕಾವುಗಳ, ನೋವುಗಳ ಬೇಗುದಿಯ ಭೈರವವ-
ನರಿತೀಯೆ ; ಅರಿತು ನಿನ್ನೆದೆ ಕರಗಿ ಚಿಮ್ಮೀತು ;
ಅನುಕಂಪ ರಸಗಂಗೆ ಹರಿದೀತು ; ಎಂಬೊಂದು
ಆಸೆಯಿಂದಿದೊ ಓಡುತಿಹುದು ಲೆಕ್ಕಣಿಕೆ ಪದ
ಪದವಾಗಿ ; ವಿರಹದುರಿಗೆದೆ ಕರಗಿ ನೀರಾಗಿ
ಹರಿಯುತಿದೆ ಹೃದಯವೇ ಹಾಡಾಗಿ ಹೊನಲಾಗಿ.

ಆಡಿದುದನೆ ಆಡಿ ಆಡಿ ಬೇಸರಗೊಳಿಪೆ-
ನೆಂದು ಕಡೆಗಾಣದಿರು ; ಕಾದಲ್ಮೆ ಹೆಗ್ಗಡಲು
ನುಡಿನುಡಿಯ ಕಾಲುವೆಯೊಳೆಂತು ಪಡಿಮೂಡೀತು ?
ತಿರುತಿರುಗಿ ಮರಮರಳಿ ಅದನದನೆ ನುಡಿಯದಿರೆ,
ಒಂದೆ ಮಂತ್ರವನು ನೂರಾರು ಸಲ ಜಪಿಸದಿರೆ,
ಸಿದ್ಧಿ ಬಹುದಂತೆನ್ನ ಮನದನ್ನೆ ? ಇದನೆಲ್ಲ
ತಿಳಿವ ಬಲುಹಿದೆ ನಿನ್ನೊಳದಕಾಗಿ ನುಡಿವೆನಿದೊ :

ಬೆಳೆಯುತಿವೆ ನಿನ್ನ ಹೃದಯದ ಕಂಪು ತಂಪುಗಳು ;
ತಿಳಿಯುತಿದೆ ನಿನ್ನ ಮನ ; ಕಾವ್ಯಕಲೆ ತಾನಾಗಿ
ನಿನ್ನ ಮೃದು ಹೃದಯದಲಿ ಪ್ರತ್ಯಕ್ಷವಾಗುತಿದೆ ;
ನಿನ್ನ ಕಣ್ಣಾಲಿಯಲಿ ಕಾಣುತಿದೆ ಕಾಣದೂ-
ರಿನ ಸೊಬಗು ; ದೇದೀಪ್ಯಮಾನ ಭಾವದ ಕಾಂತಿ
ನಿನ್ನ ಕಣ್ಣುಗಳಿಂದ ಪುಟಿಯುತಿದೆ ; ನನ್ನೆದೆಯ
ಗೆರೆಗೆರೆಯನೂ ಓದಿ ತಿಳಿವ ಬಲ ಅರಳುತಿದೆ.
ಗಾಳಿದೇರಿನ ಮೇಲೆ ತೇಲಿ ಬಹ ಮಂದಾರ
ಗಂಧವೆನೆ ನಿನ್ನ ಹಿತಮಿತವಚನ ನನ್ನೆದೆಯ
ತುಂಬುತಿದೆ ; ಘೋರಾಂಧಕಾರದಲಿ ನೆಲೆಗಾಣ-
ದಳಲಿ ಬಳಲಿದ ಬಾಲ ಹೃದಯವೆನ್ನದು. ನಿನ್ನ
ಕಿರುನಗೆಯ ಮಿಂಚು ಮರೆಯಾದರೆನಗಿನ್ನಾವ
ಬೆಳಕುಂಟು ? ನಿನ್ನ ಕೈ ಈ ಕೈಯ ಹಿಡಿದು ಸಂ-
ತವಿಸಿದರೆ ಸಾಂತ್ವನವನಿನ್ನೆಲ್ಲಿ ಕೊಂಬೆ ನಾ ?
ಇನ್ನೆಲ್ಲಿ ಹೃದಯ ಹೃದಯದ ಮಧುರ ಸಂವಾದ ?
ಇನ್ನೆಲ್ಲಿ, ಹಾ, ನಲ್ಲೆ ! ಬಾಳು, ಬಾಳಿನ ಬಯಕೆ ?

ಇದೊ ನೋಡು : ಮನವಿಂದು ತುಂಬುತಿದೆ ; ಕಂಠ ಗ-
ದ್ಗದವಾಗುತಿದೆ : ಕಣ್ಣು ಹನಿಯುತಿದೆ ; ಮಾತುಗಳು
ಬತ್ತುತಿವೆ ; ಭಾವಕೋಕಿಲ ಮೂಗುವಡುತಲಿದೆ ;
ಅಗೊ ! ಅಲ್ಲಿ ಕಂಗೊಳಿಪ ನಿನ್ನ ಪ್ರತಿಬಿಂಬದಲಿ
ನಗೆಯೇಕೆ ಮರೆಯಾಯ್ತು ? ನಿನ್ನ ಹುಬ್ಬುಗಳಲ್ಲಿ
ಏತಕಯ್ಯೋ ಮುನಿಸು ಹೆದೆಯೇರುತಿದೆ ? ನಿನ್ನ
ಕಣ್ಣುಗಳೊಳೇಕೆ ಸಂಶಯಪಿಶಾಚದ ನಾಟ್ಯ ?

ತಪ್ಪೆನ್ನದಾವುದದ ಪೇಳು, ಮುದ್ದಿಸಿ ರಮಿಸಿ.
ನಿನ್ನ ನುಡಿನುಡಿ ವೇದವಾಕ್ಯವೆಂದೇ ಬಗೆದು

ಧರಿಸಲಿಲ್ಲವೆ ನಾನು ನನ್ನ ಈ ಹೃದಯದಲಿ?
ಕೊಡಲಾರದುದನು ನೀಡೆಂದು ನಾ ಬೇಡಿದೆನೆ?
ಬರಲಾರದುದನು ಬರಿಸೆಂದು ನಾ ಕಾಡಿದೆನೆ?
ದೂಡಿದೆನೆ ಕೋಡುಗಲ್ಲಿಂದ ಕೆಳಕಂದರಕೆ?
ಮುಳ್ಳುಗಳ ನಡುವಿರುವ ಹೂವೆಂದು ಹಾಯೆಂದು
ನಿನ್ನ ಮನವೆಂತಂತೆ ನಿನ್ನ ನುಡಿಯೆಂತಂತೆ
ನಡೆಯಲಿಲ್ಲವೆ ನಾನು, ದೇವಿ? ಏನನ್ಯಾಯ-
ವೆಸಗಿದೆನು ನಾ ನಿನಗೆ? ಪ್ರೀತಿಚಕ್ರವ್ಯೂಹ
ದಲ್ಲಿ ನಿನ್ನನು ಸೆಳೆದು ತಂದೆ. ಈ ತಪ್ಪಲ್ಲ-
ದಿನ್ನಾವುದಿದೆ? ಹೇಳು. ಅದಕಾಗಿ ಇನಿತೊಂದು
ರೋಷವೇ? ಅದಕೀ ಅವಿಶ್ವಾಸವೆಂಬ ಘನ
ಘೋರ ದಂಡವೆ? ಹೇಳು, ಹೇಳೆನ್ನ ಮನದನ್ನೆ!

ನೂರಾರು ಸವಿನೆನಪು ಮನದಿ ಮುಂದಯಿಸುತಿರೆ
ದೂರದಲ್ಲಿನ ಪ್ರಿಯೆಯ ಸುಂದರಾಕಾರ ಕೈ-
ಯೆತ್ತಿ ಕೊರಲೆತ್ತಿ ಮನವೆತ್ತಿ ಕರೆ ಕರೆಯುತಿರೆ
ಸ್ಫುರಿಸುತಿರುವೆದೆ, ಕಂಪಮಾನ ದೇಹವು, ತೃಷಿತ
ನಯನಗಳು ಓಡೋಡಿ ಹಾರಿಬರುವುವು ಪವನ
ವೇಗದಲಿ ನಿನ್ನೆಡೆಗೆ; ನಿನ್ನ ನಲ್ದೋಳುಗಳ
ಉಯ್ಯಲೆಗೆ; ನಿನ್ನ ಬಿಂಬಾಧರದ ಜೇಂಗೊಡಕೆ;
ನಿನ್ನ ಚಿರಸುಂದರ ಶರೀರನಂದನವನಕೆ,
ನಿನ್ನ ಬಂಧುರ ಮನೋಮಾನಸ ಸರೋವರಕೆ!

ಅಂತು ಬರುವೆನು ನಾನು; ನಿನ್ನೆದೆಯ ಕಾರಂಜಿ
ಪುಟಿಯೆ ಆ ಅದರ ಪೀಯೂಷಧಾರಾಸಾರ-
ದಲ್ಲಿ ವಿಹರಿಸಿ ಮಿಂದು ಕುಡಿದು ಮುಳುಮುಳುಗಿ ಮೈ

ಮನದ ದಾವಾಗ್ನಿಯನು ತವಿಸಿಕೊಳಲೆಂದು ; ಆ
ತಂಪಿನಿಂಪಿನ ರಸದ ಬುತ್ತಿಯೊಡನೀ ಬಾಳ
ಮರುವಿನಲಿ ಮುಂದಡಿಯನಿಡಲೆಂದು ; ನೀನಿದನು
ತಿಳಿತಿಳಿದು ಒಂದೊಂದು ನುಡಿ ಬಾಣದಿಂದೆನ್ನ
ಹೃದಯಸುಮವನು ನುಚ್ಚುನೂರುಗೊಳಿಪೆಯ ? ಒಂದು
ಬಿರುನುಡಿಯ ಬಿರುಗಾಳಿಯಿಂದೆನ್ನ ಗಾಳಿಗೋ-
ಪುರವನೊಂದೇ ಕ್ಷಣದಿ ಮಣ್ಣುಗೊಳಿಪೆಯ ? ಒಂದೆ
ಒಂದವಿಶ್ವಾಸಭಾವದ ಭಾರದಿಂದೆನ್ನ
ಬಾಳ ತಳಿರನು ಕೆಸರಿನಾಳದಲಿ ಹೂಳುವೆಯ ?
ಏತಕಿದು, ಏತಕಿದು ? ಎನ್ನೊಲವೆ, ಓ ಚೆಲುವೆ !

ಇನಿತೊಲವು, ಇನಿತು ದಯೆ, ಇನಿತೊಂದು ಸೌಜನ್ಯ,
ಇನಿತೊಂದು ಮೃದುತೆ, ಇನಿತೊಂದೂಹೆ, ಔದಾರ್ಯ,
ಇನಿತೊಂದು ಧೀಶಕ್ತಿ ನಿನ್ನದಾಗಿಯು ಕೂಡ
ಈ ಹೃದಯದೀ ವಿಲಾಪದ ಹುರುಳನರಿಯೆಯಾ ?
ಈ ಅಂತರಂಗದ ದುರಂತವನು ಕಾಣೆಯಾ ?
ಏತಕೇತಕೆ ನಲ್ಲೆ ? ಏಕೆ ಇಂತಾಗುತಿದೆ ?

ದಿನದಿನಗಳುರುಳಿದರು, ಸುಖದುಃಖವೇಣಿಯಲಿ
ಕೊಚ್ಚಿಹೋದರು ಕೂಡ ಬಹು ದೂರ ಈ ಬಾಳು,
ಅವರಿವರ ಕೆಳೆನೇಹ ಬಿಗಿದರೂ ಓ ನಲ್ಲೆ !
ನೀನಲ್ಲದೀ ಮನಕೆ ಬೇರಿಲ್ಲ ದೈವತವು ;
ನೀನಲ್ಲದೀ ಬಾಳ್ಗೆ ಬೇರಿಲ್ಲ ಧ್ರುವತಾರೆ ;
ನಿನ್ನೊಲವೆ ಅದರುಸುರು, ಅದರ ಬಲ, ಅದರ ಚಲ !
ಇದೆ ನನ್ನ ಕೊನೆ ಮಾತು. ಇಲ್ಲೆ ಕೊನೆಗಾಣುವುದು

ಈ ವಿಫಲ ಜೀವಿತವು. ಈ ಒಂದೆ ನಿರ್ಧಾರ
ಕೆತ್ತಿ ಕಾಂಬುದು ನನ್ನ ಹೃದಯದಲಿ, ಈ ದೇಹ
ಮೃತ್ಯುವಶವಾದರೂ, ಯುಗಯುಗಗಳಳಿದರೂ.
ಇದ ಕೇಳಿ ನಿನ್ನ ಮನ ಕರಗದಿರೆ ಈ ಬಾಳು /
ಮುಗಿವುದಿಲ್ಲಿಗೆ ; ಮುಂದೆ ನಡೆವ ಹೆಣವಾಗಿ ನಾ
ಅಂತೊ ಇಂತೋ ಜೀವಿಸುವೆನು ಮೃತ್ಯುವ ಮಂದ-
ಹಾಸವನು ಕಾಯುತ್ತ, ನಿನ್ನೊಂದೆ ನಾಮಜಪ
ಗೈಯುತ್ತ, ಹುಟ್ಟನೀ ಶಾಪವನು ಸವೆಯುತ್ತ.

# ನನ್ನ ನಿನ್ನ ನಡುವೆ

ಇಲ್ಲಿ ನನ್ನ ನಿನ್ನ ನಡುವೆ ಎಂಥ ಕಡಲು ನಿಂತಿದೆ,
ಅದೆಂಥ ಕಡಲು ನಿಂತಿದೆ;
ಅಂತವಿಲ್ಲ ಪಾರವಿಲ್ಲದಂತೆ ಸಿಡಿದು ನಿಂತಿದೆ,
ಅಯ್ಯೊ, ಸಿಡಿದು ನಿಂತಿದೆ!
ಅದನು ದಾಟಿ ಬರಲು ಬಂದ ಬಾಳು ಸಾಲದಂತಿದೆ,
ಅಯ್ಯೊ, ಸಾಲದಂತಿದೆ!

ನನ್ನದಿಲ್ಲಿ ಈ ತೀರ, ನಿನ್ನದದೋ ಆ ತೀರ;
ಅವರ ನಡುವೆ ಮೊರೆವ ತೆರೆಗಳೋಳಿ ಎನಿತು ಘೋರಘೋರ!
ಭೋರೆಂದು ಕೂಗಿ ರೇಗಿ ಕಿವಿಯ ಕೊರೆಯುವೀ ಸವಿಾರ
ನನ್ನ ಕೂಗು ನಿನ್ನ ಕಿವಿಗೆ ಬೀಳದಂತೆ ಮಾಡಿದೆ—

ಅಯ್ಯೊ, ನನ್ನ ನಿನ್ನ ನಡುವೆ ಎಂಥ ಕಡಲು ಮೂಡಿದೆ,
ಅದೆಂಥ ಕಡಲು ಮೂಡಿದೆ!

# ಏತಕೆ ?

ಏತಕೇತಕೆ ಏತಕೆ ? ಇದು
ಏತಕೀ ಪರಿ ವರ್ತನ ?
ಏತಕೀ ಪರಿವರ್ತನ ?

ಏತಕೆನ್ನೀ ಎದೆಯ ಮೇಲೀ ದೂರಭಾವದ ಘೋರತಾಂಡವ ನರ್ತನ ?
ಮುರಿಯುತಿದೆ, ತತ್ತರಿಸುತಿದೆ, ಹುಡಿಗೂಡಿಡುತಿದೆ ನನ್ನೀ ಮನ :
ನಿನ್ನವಜ್ಞೆಯ ಸಿಡಿಲು ಸಿಡಿಯಿತು ; ಒಡೆಯಿತೆದೆ, ಹಾ, ಒಡೆಯಿತು !
ನಿನ್ನ ಮೌನದ ಮೊನೆಯು ತಾಗಿತು, ಬಾಳ ಮುಗುಳಿದೊ ಕಳಚಿತು,
ಭವದ ಚೆಲುವಿನ ಬಳ್ಳಿಯಿಂದಲಿ
ಬಾಳ ಮುಗುಳಿದೊ ಕಳಚಿತು,
ಅಂತವಿಲ್ಲದ ಅಳಲ ಮರಳಿನ ಹಂಚಿನಲಿ ಹುರಿಹುರಿಯಿತು !

ಇದನು ಕಾಣುವ ಕಣ್ಣು ನಿನಗೂ
ಇಲ್ಲವಾಯಿತು, ಆಯಿತು.
ಇನ್ನು ಯಾವೆಡೆ ಹುಡುಕಲಾಸರ ?
ಎದೆ ನಿರಾಶ್ರಯವಾಯಿತು.

ಏತಕೇತಕೆ ಏತಕೆ ?— ಇದು— ಏತಕೀ ಪರಿವರ್ತನ ?

# ಪರಿತಾಪ

ಒಂದೆ ಮಾತಿಗೆ ನಂದಿಹೋಯಿತೆ
　ನಮ್ಮ ನಂದಾದೀಪವು ?
ಒಂದೆ ಬಿರುನುಡಿಬಿಸಿಗೆ ಬತ್ತಿತೆ
　ನಮ್ಮ ಒಲವಿನ ಸಿಂಧುವು ?
ಮುಗಿಲಿನೊಂದೇ ತುಣುಕು ತಾಗಲು
　ಕಂದಿತೇ ಹಾ ಚಂದ್ರಿಕೆ ?
ಒಂದೆ ಮಂಜಿನ ಹನಿಗೆ ಬಂದುದೆ
　ಅಳಿವು ಮುಗುಳಿನ ಚಂದಕೆ ?

ಒಲವಿನೋಲೆಗಳಿಲ್ಲ. ಓಲೆಗ-
　ಳಿಲ್ಲು ಒಲವನು ಕಾಣೆನೆ !
ನಲವು ಬಾಳಿನೊಳಿಲ್ಲ ನಿನ್ನೊಳು
　ಅದನು ಕಾಣದೆ ಹೋದೆನೆ ?
ತಾಳಲಾರೆನು ನಲ್ಲೆ ! ನಲ್ಮೆಯ
　ನೋವು ನಿನ್ನೆದೆ ತಾಗದೆ ?
ಮೌನಭೂತವನೇಕೆ ಕರೆದೆಯೆ
　ನಮ್ಮ ನಲುಮೆಯ ನಾಡಿಗೆ,
　ನಮ್ಮ ಒಲವಿನ ಬೀಡಿಗೆ ?

ನಿನ್ನ ನುಣ್ದುಟಿ ಸೋಂಕಿದೀ ತುಟಿ
　ಕೆನ್ನೆಗಳು ಮಿಡಿದೆದ್ದು ಮೊರೆವುವು ;
ಏನ ನುಡಿವುವು ? ಏನ ಮಿಡಿವುವು ?
　ಯಾವ ಸಂದೇಶವನು ಕೊಡುವುವು ?
ನಿನ್ನೊಲವಿಗಳಿವಿಲ್ಲ. ನಿನ್ನಯ

ನೇಹ ಅಜರಾಮರವು; ನಿನ್ನೆದೆ
ಯಲ್ಲಿ ನನಗಿದೆ ಮೀಸಲಾಗಿಯೆ
ಒಂದು ಸುಂದರ ಪೀಠವು.

ನಿನ್ನ ಮರೆವೆನೆ ನಾನು? ಗಗನವು
ಮರೆಯಬಲ್ಲುದೆ ಚಂದ್ರನ?
ಕಡಲು ದಡವನು ಮರೆಯಬಲ್ಲುದೆ?
ಗಿಡವು ಸುಗ್ಗಿಯ ಚಂದವ?
ನನ್ನ ಬಾಳಿನ ಬಾಳು ನೀನೇ,
ನನ್ನ ಉಸುರಿನ ಉಸುರು ನೀನೆ,
ನನ್ನೆದೆಯ ಮೇಲೆಲ್ಲ ಕಾಣದೆ
ನಿನ್ನ ಕಥೆಯೇ ಕಥನವೇ?

ನಂಬೆ ನಾ ನಮ್ಮೊಲವನೆಲ್ಲವ
ಒಂದೆ ಬಿರುನುಡಿ ಕೊಂದುದೆಂಬುದ
ನಂಬೆ ನಾ ನಿಂತಿರುವ ನೆಲವೇ
ಕುಸಿದುಬಿದ್ದಿದೆ ಎಂಬುದ;
ಇಂದು ಈ ನನ್ನೆದೆಯ ರಾಣಿಯು
ತನ್ನ ನಾಡನು ಮರೆತಳೆಂಬುದ,
ತಾರೆಗಳು ಮುನಿದಿರುವುವೆಂದರೆ
ನಂಬಬಲ್ಲುದೆ ಅಂಬುದ?

ನಾನು ನೀನೂ ಸಖ-ಸಖಿ,
ನಂಬಿದೆನು ನಾ ಶಶಿಮುಖಿ!
ಅಹುದು ಅಹುದೆಂದೊಮ್ಮೆ ನುಡಿ, ನುಡಿ;
ಸಾಕು ಮೌನದ ಯಾತನೆ;
ಇಲ್ಲವಾದರೆ ಇಲ್ಲವೆಂದೇ

ನುಡಿದುಬಿಡು ನೀ ಥಟ್ಟನೆ !
ಓಡುವೆನು ನಾ ದೂರದೂರಕೆ,
ದಾರಿಯಿದೆ ನಡೆವಾತಗೆ ;
ಬಾಳ ಪಣದಲಿ ಸೋತ ಭೀತಗು
ಸಾವಿನರಮನೆ ಕಾದಿದೆ !

# ಓ ನನ್ನ ಜನವೇ!

೧

ಓ ಬನ್ನಿ ಜನವೆ, ಕನ್ನಡ ಹೊಲದ ತೆನೆತೆನೆಯೆ,
ಕೂಡುತಿಹ ಕನ್ನಡದ ಹಾಲ ಕೆನೆಯೇ,
ಬಿರುಗಾಳಿಗೊಗ್ಗೂಡಿ ಬಹ ಮೇಘಕಣಕಣವೆ,
ಓ ನನ್ನ ಜನವೆ.

ಬನ್ನಿರೋ ಬನ್ನಿ ಕನ್ನಡನಾಡ ಗಡಿಮೂಲೆ
ಮೂಲೆಯಿಂದ,
ಹಳ್ಳಿಪಟ್ಟಣಗಳಿಂದ.
ಸುಗ್ಗಿಗಾಳಿಗೆ ಹಿಗ್ಗಿ ಬೆಳ್ಗೊಡೆಗಳನು ನೆಗ್ಗಿ
ಸುಗ್ಗಿ ಬಹ ಬೂರಲದ
ಮಾಲೆಯಂದ;
ಅಗೆವ ಬಾವಿಗೆ ದಿಕ್ಕುದಿಕ್ಕಿನಿಂದಲು ನೆಗೆದು
ಚಿಮ್ಮಿ ಬಹ ಚಿಲುಮೆಗಳ ಚಳುಕಿನಂದ.

೨

ತೆಂಗು ಕೈಯೆತ್ತಿ ಕರೆಕರೆವ ಪಡುಗಡಲ ಕರೆ
ಮುರಿವ ತೆರೆತೆರೆ ರುಬ್ಬುವೊರೆಗಳಿಂದ,
ಮುಂಗಾರು ಕೊಪ್ಪರಿಗೆ ಧುಮುಕಿ ಮಳೆಪನಿ ಒಸಕೆ
ಬಡಿದು ಪಳಗದ ಮೊಂಡಮಣ್ಣಿನಿಂದ,
ಪರಶುರಾಮನ ಕೃಪಣಭೂಮಿಯಿಂದ;
ದುಡಿತದೈತ್ಯನ ಬೂಟುಕಾಲಿನಡಿಹುಡಿಯಿಂದ,
ಬಾಡಿದಾಸೆಯ ಬಳ್ಳಿಮಾಡದಿಂದ;
ಕೈ ಕೆಸರು, ಬಾಯಿಯೂ ಕೆಸರು, ಹೊಗೆಹಬೆ ಉಸುರು—
ಮುಡುವುಗಟ್ಟಿದ ಬೆವರುಜವುಗಿನಿಂದ,

ಮೇಲುಬಾಳಿನ ಆಸೆ ಹೊತ್ತು ತನ್ನಿರಿ, ಅಣ್ಣ,
ಆಷಾಢದಲಿ ಕೊಳ್ಳಿದೆವ್ವದಂದ,
ಪಡುಕಿನಾರೆಯ ಮಚ್ಚಿಲಗಗಳಿಂದ.

೩

ಮರಮರದ ಮರ್ಮರದ ಗುಡ್ಡಬೇರಿನ ಮನೆಯು,
ಅಡಿಕೆಸೋಗೆಯು ಸುಗಿವ, ಮಾವು ಮಾರ್ಮಲಿವ,
ಹಲಸುನೇರಿಳೆನಿಂಬೆ ಕಿತ್ತಳೆಯ ಪೇರಳೆಯ
ಸುತ್ತಭತ್ತದ ಕಾಫಿಮೆಣಸು ಯಾಲಕ್ಕಿಗಳ
ಉಕ್ಕುಬೆಳೆಗಳ ಹಸುರುತೆಕ್ಕೆಯಿಂದ ;
ಕಬ್ಬುನೆಲದೆದೆಹಾಲಿನುಕ್ಕಂದದಿಂದ
ಅರೆಗುಟುಕು ಪಡೆವ ಬಡಕರುಗಳಂದ ;
ಜಡಿಯು ಸೋನೆಯ ಚಳಿಯ ಕುಲುಕಿನಿಂದ,
ಮಲೆಜ್ವರದ ಪೈಶಾಚಗಾಣದಿಂದ
ನೆತ್ತರಡಗಿದ ಬೆಳರುಬಾಳಿನಿಂದ;
ಹುಲಿ ಆನೆ ಚಿರತೆ ಕಾಡೆಮ್ಮೆಗಳ ಬೀಡಿಂದ,
ಮಲೆನಾಡಿನಿಂದ.

೪

ಕಬ್ಬಿಣದ ಕರಿಮಣ್ಣ ಎದೆಯ ಕದವೊಡೆದೊಗೆದು
ಪಾತಾಳದಲಿ ಪುಟಿವ ನೀರ ಮೊಗೆದು,
ಬಾಳು ಸಾವಿನ ಮೇಲೆ ಕೋಟೆಕೆರಳಿದ ಹಾಗೆ
ಹಸುರು ತೆಪ್ಪದಿ ಜೀವ ಜೀಕುತಿರುವ,
ದುಡಿತ ಉರಿದಾರಿಯಲಿ ಏದುತಿರುವ,
ಬೆವರ ಹೊಳೆ ತಣಿವುಕರೆ ಮುಟ್ಟದಿರುವ,
ಮಹಲ ಅಂಗಡಿಯ ಗೋದಾಮುಹೆಗ್ಗಣವುಂಡು
ಬಿಸುಟ ಜಳ್ಳಿನ ಚೀಲಚೀಲದಂದ ;

ಸೇಂಗ ಉಳ್ಳಾಗಡ್ಡಿ ಜೋಳಗಳ ಬಣಬೆಗಳ
ಹತ್ತಿ ಮೆದೆಮೆದೆ ಹೊದೆವ ಬೀಡಿನಿಂದ;
ಕಬ್ಬಿಣದ ಮೈಯ ಬಂಗಾರದದುರೆದೆಯಿಂದ,
ಬಯಲುನಾಡಿಂದ.
ಬನ್ನಿರೋ ಬನ್ನಿ ನನ್ನೆದೆಗೆ ಬನ್ನಿ!

೫

ಬೆಟ್ಟದೆರೆತೊರೆ ನಾನು; ತರಿತರಿವ ಕಗ್ಗಲು
ಬಂಡೆಬಂಡೆಗೆ ಧುಮುಕಿ ಬಿದ್ದು ಸಿಗಿದು;
ಕಗ್ಗವಿಯ ಕತ್ತಲಲಿ ಕೆಟ್ಟು ಮುಮ್ಮಲ ಮರುಗಿ
ಕೊಳ್ಳಗಳ ಕಚಗುಳಿಗೆ ನಕ್ಕು ನೆಗೆದು;
ಕೆಸರಲ್ಲಿ ಕುಸಿದು ಕುಂಟಿದೆ; ಕೊಳೆವ ತರಗಲಲಿ
ಉಸಿರು ಕಟ್ಟಿದೆ ಹೊಟ್ಟೆ ಹೊಸೆದು ಬಸಿದು.
ಓ ಅಲ್ಲಿ ಕಾಣುತಿದೆ ಜನದ ಜೀವಸಮುದ್ರ;
ಅಳಿವೆಬಳಿ ಮರಳಲ್ಲಿ ಇಂಗುತಿಹೆನು;
ಬನ್ನಿರೋ ಬನ್ನಿ, ತೆರೆತೆರೆಯಾಗಿ ಭೋರ್ಗರೆದು
ನುಗ್ಗಿ ಕೊಚ್ಚಿರಿ ಹೊಯಿಗೆ ಕೊತ್ತಳಗಳ;
ತಬ್ಬಿಕೊಳ್ಳಿರಿ ನಿಮ್ಮಕೂಸ; ಹಾಡುವೆನಾಗ:
ಅದ್ರಿಭಾವಕೆ ಈ ಸಮುದ್ರ—ತಾಳ,
ಮಲೆಯ ಬಯಲಿನ ಸಾನುಕೂಲ ಮೇಳ.

೬

ತನ್ನಿರೋ ತನ್ನಿ ನನ್ನೆದೆಗೆ ತನ್ನಿ;
ತನ್ನಿ ನಿಮ್ಮ ಅಬೋಧಭಾವ ಅಂಬೋಧಗಳ
ವಿದ್ಯದಾಸೆಯ ಮುಗ್ಧನಾಲಗೆಗಳ,
ಒಳತಳದಿ ಮಲಗಿ ಕಾಯುವ, ನೋಯುವಾಸೆಗಳ
ಮಂದಾರಬೀಜಗಳ ಕೊಳಗ, ಕೊಳಗ.

ಶತಮಾನಗಳು ಕೆತ್ತಿ ಕಡೆದು ಗುಡಿಕಟ್ಟಿರುವ
ನುಡಿಯ ಗುಮ್ಮಟ, ಶಿಲಾಬಾಲಿಕೆಯರ,
ಋಷಿಮುನಿಗಳಿದೆಯ ಸುಧೆ ನಿಂತು ಗುಳುಗುಳಿಸುತಿಹ
ಕನಸುಗಳ ಒಳತೊರೆಯ ಮರ್ಮರಗಳ ;
ಕಲ್ಲುಮಣ್ಣಲಿ ಹೂತ ಹಾಳುಹಂಪೆಯ ಮರೆತ
ನವರತ್ನ ಭಂಡಾರ, ಹೊನ್ನ ಗಣಿಯ :
ಹೆಜ್ಜೆಹೆಜ್ಜೆಗೆ ಕುಣಿವ, ಮಣಿವ, ಬವಲುವ ಭಂಗಿ—
ದನಿಯ ಏರಿಳಿತಗಳ, ನಗೆಯ ಬಗೆಯ.

೭

ಓ ಬನ್ನಿ ಜನವೆ, ಕನ್ನಡನಾಡ ಗಡಿಮೂಲೆ
ಮೂಲೆಯಿಂದ,
ಹಳ್ಳಿ ಪಟ್ಟಣಗಳಿಂದ ;
ಮೈಸೂರೊ ಮಂಗಳೂರೋ ಧಾರವಾಡವೋ
ರಾಯಚೂರೋ—ಎಂಟು ದಿಕ್ಕಿನಿಂದ.
ಮುಳುಗಿದೀ ಕನ್ನಡವನೆತ್ತುವೊಮ್ಮನ ಮಿಣಿಯ
ಬಿಗಿವ, ಎಳೆಯುವ, ಗೆಲುವ ಭಾವದಿಂದ,
ಬನ್ನಿರೋ ಬನ್ನಿ, ನನ್ನೆದೆಗೆ ಬನ್ನಿ !

# ವಿಫಲ

೧

ಇಲ್ಲ, ಇಲ್ಲ—ಏನೊಂದನು ಮಾಡಲಿಲ್ಲ ಇವನು.

ತರಗೆಲೆಗಳು ಅಲೆಯುತಿಹುವು ಗಾಳಿಯಲ್ಲಿ ಅತ್ತ ಇತ್ತ :
ತೊರೆಯ ಮೇಲೆ ಕಸವು ಕಡ್ಡಿ ಮರದ ತುಂಡು ಕೊಳೆಯು ನೊರೆ
ತೇಲುತಿಹುವು, ತೇಲುತಿಹುವು.
ಬ್ಯಾ, ಬ್ಯಾ, ಬ್ಯಾ ಎಂದು ಕುರಿ
ಹುಲ್ಲುಗಾವಲಲ್ಲಿ ಅಲ್ಲಿ
ಮತ್ತೆ ರೊಪ್ಪದಲ್ಲಿ.
ಬೀದಿನಾಯಿ ಬೀದಿಗುಂಟ
ಅವನು ಇವನು ಮೂಸುತ :
ಎಂಜಲನ್ನ, ಎಂಜಲೆಲೆ,
ಚರಂಡಿಯಲ್ಲಿ ಇಲಿ ಹೆಗ್ಗಣ—
ಹೆಣ್ಣು ನಾಯಿ ಮುಂದೆ ಮುಂದೆ,
ಅದರ ಬೆನ್ನ ಹಿಂದೆ
ಬೌ ವೌ ವೌ ಬಕ್ ವೌ ವೌ–
ಹರಿದ ತೊಗಲು, ಕಿತ್ತ ಕಣ್ಣು
ತರಿದ ತಲೆ, ಮುರಿದ ಕಾಲು ;
ನೆತ್ತರೋ ನೆತ್ತರು—
ಬೀದಿನಾಯಿ ಬೀದಿಯಲ್ಲಿ !

೨

ಕಗ್ಗವಿಯಲಿ ಐದೊ ಆರೊ
ಕಿಂಡಿ ಒಂದು ಬಾಗಿಲು ;
ಅದಕೆ ಒಳಗು ಹೊರಗು ಕೂಡ

ಇತ್ತು ಬೀಗಮುದ್ರೆಯು.
ಕಿಂಡಿಗಿಂಡಿಯಿಂದ ಬೆಳಕು
ಜಿನುಗುತಿತ್ತು ತೊಟಕು, ತೊಟಕು
ಅಂದು ಮೊದಲ ಹಗಲೊಳು.
ಬಳಿಕ ವನಸ್ಪತಿಯ ನೆಳಲು
ಕವಿಯೆ ಸುತ್ತುಮುತ್ತಲೂ
ಬೆಳಕು ತೊದಲತೊಡಗಲು :
ಕಿಂಡಿ ಇದೆ, ಇಲ್ಲ ಬೆಳಕು,
ಕದಲಲಿಲ್ಲ ಬಾಗಿಲು.

ಏನೊಂದನು ಏನೊಂದನು ಕಾಣಲಿಲ್ಲ ಇವನು,
ಇಲ್ಲ, ಇಲ್ಲ, ಏನೊಂದನು ಮಾಡಲಿಲ್ಲ ಈತನು.

೩

ಬೆಳಕು ಹರಿಯುತಿರಲು, ಇರಿಯು-
ತಿರಲು ಕತ್ತಲೆದೆಯನು,
ಇತ್ತು ಮರದ ಕೊರಡು ನೆಲದ
ಮೇಲೆ ಬಿದ್ದ ಹೆಣದೊಲು.
ಉರಿದನಲ್ಲಿ ಭಾನು ; ಬಾನು
ಉರಿಯನುಗುಳಿತಾದರೇನು ?
ಕೊರಡು ಕೊರಡೆ ಉಳಿಯಿತು ;
ಏಕೊ ಏನೊ ಎಲ್ಲಿಂದಲೊ
ಬಂತು ಅಂದು ಕೆಂಡದ ಮಳೆ ;
ಕೊರಡಿನ ತುದಿ ಹೊತ್ತಿತು,
ಬೆಳಕಿನ ಗುಡಿ ಎತ್ತಿತು
ಒಂದೆ ನಿಮಿಷ— ಅಷ್ಟೆ, ಅಷ್ಟೆ !
ಬೆಂಕಿ ಕೂಡ ತಿನ್ನದಂಥ

ಬರಡು ಕೊರಡು—ಪಾಪ—ಅಷ್ಟೆ !
ಉರಿ ಹತ್ತಿಯೂ ಉರಿಯಲಿಲ್ಲ,
ಬೆಳಕು ಬಂದೂ ಬೆಳಗಲಿಲ್ಲ ;
ಇಲ್ಲ, ಇಲ್ಲ; ಏನೊಂದನು ಮಾಡಲಿಲ್ಲ ಇವನು.

೪

ಜೈ ಜೈ ಜೈ— ಅಲೆ ಅಲೆ—
ಕಡಲಾಳವು ಮೊರೆದೇಳಲು
ಬಿರುಗಾಳಿಯ ತೊತ್ತಳದೊಳು
ಬಂಡೆ ಬಂಡೆ ಬಡಿ ಬಡಿಯಲು ;
ದೋಣಿ ಪಾತಿ ಹರಿಗೋಲು
ಅಲ್ಲು ಇಲ್ಲು ಎಲ್ಲೆಲ್ಲೂ
ಕಾಣಲಿಲ್ಲ ಈತನು ;
ಲಾಠಿಯ ಸುಮವೃಷ್ಟಿಯಲ್ಲಿ
ಗುಂಡಿನ ಗುಂಜಾರವದಲಿ
ಸೆರೆಮನೆಗಳ ರಂಗಮಹಲು—
ಇಲ್ಲ, ಇಲ್ಲ ಅಲ್ಲೆಲ್ಲೂ ಕಾಣಲಿಲ್ಲ ಇವನು ;
ಇಲ್ಲ ಇಲ್ಲ ಏನೊಂದನು ಮಾಡಲಿಲ್ಲ ಇವನು.

೫

ಕಗ್ಗವಿಯಲಿ ಕುಳಿತು ರವಿಯು
ಕನಸು ಕಾಣುತಿದ್ದನು ;
ಬಾಳ ಬೇರು ಅಲುಗುತಿರಲು
ಹೂವನರಸುತಿದ್ದನು ;
ಲಗ್ಗೆ ಹತ್ತಿ ಉರಿಯುತಿರಲು
ಮುಗ್ಗಿ ಹೇಳುತಿದ್ದನು.

ಹುಟ್ಟಿದುದಕೆ ಹುಟ್ಟಿಸಿದನು ;
ಹೊಟ್ಟೆಗಷ್ಟು ಗಟ್ಟಿಸಿದನು :
ಹಣಕೆ ಕುಣಿಯು ತೋಡಿ ಅಲ್ಲಿ
ತನ್ನ ತನವ ಮುಚ್ಚಿಸಿದನು.
ಇಲ್ಲ, ಇಲ್ಲ, ಏನೊಂದನು ಮಾಡಲಿಲ್ಲ ಇವನು.

# ರಾಜ್ಯ ಬಂದರೇನು ?

ರಾಜ್ಯ ಬಂದರೇನು, ರಾಜ್ಯ ಹೋದರೇನು ? ಎಲ್ಲ ಒಂದೆ.

ಪರಕೀಯರ ದಬ್ಬಾಳಿಕೆ,
ನಮ್ಮವರೆದೆಯುಬ್ಬಾಳಿಕೆ,
ಮಬ್ಬಾಳಿಕೆ, ಗಬ್ಬಾಳಿಕೆ—
ಎಲ್ಲ ಒಂದೆ, ಒಂದೆ !

ಅವರ ರಾಜ್ಯ, ಇವರ ರಾಜ್ಯ, ನಮ್ಮ ರಾಜ್ಯ, ನಿಮ್ಮರಾಜ್ಯ—
ಎಂಥದೋ ಕುಚೋದ್ಯ !
ಉರಿವ ಬೆಂಕಿ ಉರಿಯುತಿರೆ
ಹಾಕು, ಹಾಕು ಆಜ್ಯ,
ಬಂತು ಹೊಸತು ರಾಜ್ಯ !

ಬೇಡ ಕಬ್ಬಿಣದ ಬೇಡಿ,
ಬೇಕು ಹೊನ್ನ ಸಂಕೋಲೆ !
ಲಾಭದಾಸೆನೇಣಿನಲ್ಲಿ ಗೋಣ್ಮುರಿಯುತ್ತಿದೆ, ಪಾಪ,
ನರನ ದಿವ್ಯರೂಪ.

ಹಸಿವೆ ಕುಲುಮೆಯಲ್ಲಿ ಬರಲಿ
ಕಂಬನಿಗಳ ಕಾಲುವೆ,
ಇಲ್ಲ ಎಂಬ ಬೆಂಕಿಯುರಿಸು,
ನೆತ್ತರನ್ನು ಕೊಂಚ ಬೆರಸು,
ಎದೆ ಎದೆಗಳ ತಿದಿಯನೊತ್ತು ;
ಬಿತ್ತು ನೋಡು ಝಣಝಣ,
ಮನವ ತಣಿಪ ಈ ಹಣ !
ಅದನು ಗೋರಿ ಚಪ್ಪರಿಸಿ

ಚರಂಡಿಯಿಂದ ಮೇಲೇಳುವ ಲೋಳಿಮೈಯ ಹೆಗ್ಗಣ,
ಆನೆಯಂತೆ ಮಾರ್ಮಲೆಯುವ ಕುದುರೆಯಂತೆ ಕೆನೆಕೆನೆಯುವ
ನಡೆವ ಅದರ ನರ್ತನ
ನೋಡಿ ಎಲಾ ಬಡ ಜಿರಳೆ! ಹೊರಳು ಕಾಲ ಬಳಿಯಲಿ,
ಅಡಿಯ ಹುಡಿಯ ಮುಡಿಯೊಳಿಟ್ಟು ಹಾಕು ಲಾಗ ತದಿಗಿಣ,
ನಮೋ ನಮೋ ಹೆಗ್ಗಣ!

ತೆರೆಯೇರಿತು, ತೆರೆ ಮೊರೆಯಿತು,
ತೆರೆಯಿಳಿಯಿತು ನೋಡು;
ಬಿರುಗಾಳಿಯು ಘೋರ್ಗರೆಯಿತು,
ಈಗ ಶಾಂತಿ ನೆಲೆಯೂರಿತು;
ಸೂರ್ಯಚಂದ್ರರೊಡ್ಡೋಲಗ
ಗ್ರಹತಾರಾ ತುಮುಲರಾಗ
ನೋಡು ಕಡಲಿನುಲ್ಲಸ:
ಗುಡ್ಡ ಬೆಟ್ಟ ಮಲೆ ಬಯಲು
ತೊರೆಹೊಳೆಗಳ ಅಂಜಲಿಯೊಳು
ನೀಡುತಿಹುವು ದಿನದಿನವೂ
ಹೊಸ ನೀರಿನ ಉಡುಗೊರೆ;
ಆದರೇನು ಕಡಲ ಗಾತ್ರ ಕಡಲ ಪಾತ್ರ ಪರಿಮಿತ,
ಅಂತೆ ನರನ ಜೀವಿತ!

ಕಡಲ ನೀರು ಮುಗಿಲ ತೇರ-
ನೇರಿ ಬೀಳದಂತೆಯೋ,
ಮುಗಿಲ ತಾರೆ ಕಡಲ ಸೇರಿ
ಅಲ್ಲೆ ತಾಳುವಂತೆಯೋ
ಆಗುವನಕ ಈ ಉಬ್ಬರ

ಈ ಆಡಂಬರ ಅಬ್ಬರ
ಏರಲೆಂದು ಏಳುವಲ್ಲೆ ಬೀಳುವ ಈ ಸಡಗರ
ಬೆಳೆವೆನೆಂದು ಕೊಳೆವ ಹುಂಬತನದ ಗಾಳಿಗೋಪುರ.

ಕಣ್ಣು ಮುಚ್ಚಿ ಕಣ್ಣು ತೆರೆ:
ಎಂತಿದೆ ಈ ನಾಕ!
ಸಾವಿರ ಜನ ತ್ಯಾಗವೀರರೆದೆಯ ಕಾವು ನೋವಿನಿಂದ
ಬೆಂದ ದಿವ್ಯ ಪಾಕ!
ಬೇಸಿಗೆಯಲಿ ಹತ್ತಿದಂಥ ಮನೆಮನೆಗೂ ಹಬ್ಬುವಂಥ
ಅಂಥದೊಂದು ಬೇಗೆ;
ಬುಗುಟು ಹಿಡಿದ ಕಾಳಿನಂತೆ ಒಳಗೊಳಗೇ ಕೊಳೆಯುತಿರುವ
ನಾರುತಿರುವ ಹೆಬ್ಬಗೆ.
ಇಟ್ಟಿಗೆಮೇಲಿಟ್ಟಿಗೆಯಂತೇಳುವಳಲ ಹೊರೆಹೊರೆಗೆ
ಅಸ್ಥಿವಾರವಾಗಿ ಮುರಿವ
ಮುದುಡಿ ಮುರುಟಿ ಮಿಡುಕುತಿರುವ
ಚೂರು ಚೂರು ಹುಳುಗಳು
ಸ್ವತಂತ್ರ ದೇಶ ಜನಗಳು,
ಎಂಥ ಪ್ರೇತಗಣಗಳು!

ಕೈಯಾಡಿತು ಬೀಳಲಿಲ್ಲ ಏಟು;
ಕಾಲಾಡಿತು, ಓಡಲಿಲ್ಲ ಕ್ರಾಂತಿಯು ಸಾರೋಟು;
ಬಾಯಾಡಿತು, ಆಡಿತು—
ಕೇಳಲಿಲ್ಲವಲ್ಲವಯ್ಯ, ಸಿಡಿಲಿನಾರ್ಭಟ;
ಬಡಿಯಲಿಲ್ಲವಲ್ಲ ಇನ್ನು ಮಳೆಯ ತಮ್ಮಟ!

ಇಲ್ಲಿ ಕಲ್ಲು ಮುಳ್ಳು ಕೂಡ ಅರಳಬೇಕು ಮಲ್ಲಿಗೆ,
ಹಳ್ಳ ಬಯಲು ಮಲೆಗಳೆಲ್ಲ ಹಾಯಬೇಕು ಮುಗಿಲಿಗೆ,

ಮರುಭೂಮಿಯ ಕುದಿಯುವೆದೆ ತಾಗಿ ದೇವಗಂಗೆಗೆ—
ಮನಮನ ನಂದನವನ ಮಂದಾರ ಪಾರಿಜಾತ,
ಜನಜನವೂ ಜಿನುಜಿನುಗುವ ಪ್ರೇಮರಸಸ್ರೋತ,
ಇಳಿ ಇಳಿಯುವ ಹೊಳೆಹೊಳೆಯುವ ಬೆಳಕು ಹೊಳೆಯ ಅಲೆಅಲೆಯಲಿ
ಅಲೆವ ದಿವ್ಯ ಚೇತ—
ಅಂತಾಗದೆ ಯಾವ ರಾಜ್ಯ ಬಂದರೇನೊ ಅಣ್ಣ ?
ಬರಿಯ ಮೆರುಗು ಬಂತು ನಿಜ. ಎಲ್ಲಿ ಗಟ್ಟಿ ಚಿನ್ನ ?

ರಾಜ್ಯ ಬಂದರೇನು ರಾಜ್ಯ
ಹೋದರೇನು ಎಲ್ಲ ಒಂದೆ.
ಪರಕೀಯರ ದಬ್ಬಾಳಿಕೆ,
ನಮ್ಮವರೀ ಉಬ್ಬಾಳಿಕೆ,
ಗಬ್ಬಾಳಿಕೆ, ಮಬ್ಬಾಳಿಕೆ—
ಎಲ್ಲ ಒಂದೆ ಒಂದೇ !

# ಪುಷ್ಪಕವಿಯ ಪರಾಕು

ಅವರಿವರದೇನು ಬರೆದಾರು, ಬಿಡು ; ಕೊರೆದಾರು
ಕರುಣೆಯಿಲ್ಲದೆ ರಸಿಕರೆದೆಯ ;
ಕೊರತೆಯೇ ಕವಿಗಳಿಗೆ ? ಇಹರಿಲ್ಲಿ ನೂರಾರು
ಕಲ್ಲು ಮುಳ್ಳುಗಳಂತೆ, ಹುಲ್ಲು ಜಳ್ಳುಗಳಂತೆ ;
ಮರೆತುಬಿಡಿ ಆ ಅಸುಂದರದ ಚಿಂತೆ.
ಮೂಲೋಕದೊಳಗೆಲ್ಲ ಏಕಮೇವಾದ್ವಿತೀಯ,
ಇಲ್ಲಿ ನೋಡಿರಿ, ಇಲ್ಲಿ, ಪುಷ್ಪಕವಿಯ !

ಬಲ್ಲಿರಾ ನೀವವನ ? ಆ ಕಾವ್ಯಜೀವನನ ?—
ಅಲ್ಲಲ್ಲ—ಕಾವ್ಯಕೇ ಜೀವಾಳನ :
ಕಚ್ಚೆ ಪಂಚೆಯನುಟ್ಟು, ಮುಚ್ಚು ಕೋಟನು ತೊಟ್ಟು
ತಲೆ ಮೇಲೆ ಕೋರೆ ರೂಮಾಲನಿಟ್ಟು
ಸ್ಫೂರ್ತಿ ಸಮ್ಮೂಢ ಬೀಡವನಡಕಿ ಬಾಯಲ್ಲಿ
ಚಿಟಿಕೆಯಲಿ ಮದ್ರಾಸು ನಶ್ಯ ಮಿಡಿದು
ಮೇಘತಲ್ಲೀನನೆನೆ ಕಣ್ಣು ಮೇಲಾದವನ,
ಎದೆ ಹಿಮಾಚಲದ ತುದಿ ಹಾಯುವವನ ?

ಆ ಅವನೆ ಈ ನಾನು ! ಚಂದ್ರಕಾಂತಿಯ ಭಾನು,
ನಾನೆ ಈಗಿಲ್ಲಿ ರಸಕಾಮಧೇನು ;
ನನ್ನ ಭಾವವೆ ಭಾವ, ನನ್ನ ರೀತಿಯೆ ರೀತಿ ;
ನಾನು ಕಟ್ಟುವ ಕಾವ್ಯ ಗಂಧಲೋಕ,
ಅದಕು ಮಿಗಿಲಿಲ್ಲನ್ಯ ರಸವಿಪಾಕ,
ಅದನು ಮೆಚ್ಚುವುದೇ ಕಲಾವಿವೇಕ.

## ನಡೆದು ಬಂದ ದಾರಿ

ನೋಡಿ ಎರಗಿರಿ ಕಾಲ್ಕೆ, ಹಾಡಿ ಕೊಂಡಾಡಿರೋ
ಕನ್ನಡದ ಕೀರ್ತಿಯ ಕಿರೀಟ ನಾನು ;
ಕಾವ್ಯಸಾಗರಮಥನ ನಡೆಯೆ, ರಸಪಥವೊಡೆಯೆ,
ಎದ್ದು ಬಂದೆನು, ಸುಧೆಯ ಬುಗ್ಗೆ ನಾನು !

ನನ್ನ ಕವನಗಳು ಹೊಸ ಹೂವಿನಂತೆ :
ಅದೆ ನಯವು, ಅದೆ ಸುಣುಪು, ಅದುವೆ ನಾಜೂಕು,
ಅದೆ ಕಂಪು, ತಂಪಿಂಪು, ಅದುವೆ ರಸ, ರೇಕು.

ಹೂವಿಗಿಂತಲು ಚಂದ ಯಾವುದಿದೆ ಕಂದ ?
ಕಾಯಿಯೋ ಹುಳಿ ಬೀಳು ; ಹಣ್ಣು ಕೊಳೆಯುವ ಹಾಳು,
ಬೇರು ಮುದಿನೆಲದ ಕೊಳೆಗಡ್ಡೆ ಕೇಳು ;
ಹುಣ್ಣಿಮೆಯ ಚಂದ್ರ ಬರಿಗೋಳ—ಗೀಳು !
ಬಂಗಾರಕೆಲ್ಲಿಹುದು ಈ ಇಂಥ ಕಂಪು ?
ಕಾದ ಕಬ್ಬಿಣಕುಂಟೆ ಇಂಥ ಈ ತಂಪು ?
ದನವೊ ಜನವೋ ಎಲ್ಲ ದುರ್ಗಂಧ ಸಂಕಟ ;
ಗೊಮ್ಮಟನ ನೆಮ್ಮುಗೆ ಭಯಂಕರದ ಬಾವುಟ ;
ಹುಟ್ಟು ಸಾವಿನ ಕೋಟಲೆಗಳ ಮೀಟುವ ತಂತಿ
ಹಳಮನೆಯ ಮುರುಕು ಜಂತಿ ;
ಉಬ್ಬೇರಿ ಬೊಬ್ಬಿರಿದು ಮೊರೆವ ಹೆಗ್ಗಡಲಂತೆ
ತರತರಂಗವ ತೆರೆವ ಕವಿಯ ಹೃದಯ,—
ನಾದವಿಲ್ಲದ ಬೊಬ್ಬೆ, ರಸದ ವಿಲಯ,
ಏಕತಾರಿಯ ನಾದ, ಭೇಕ ನಿನದ !

ನಾನೊ ? ಕಮ್ಮನೆ ಅರಳಿ, ಕೆರಳಿ ಜುಮ್ಮನೆ,
ಅಷ್ಟದಿಕ್ಕಿಗೂ ಮಗಮಗಿಪ ಹೊಸ ಮಲ್ಲಿಗೆ !
ಗೊಮ್ಮಟನ ನುಂಗಿ ಆದನೊಂದು ಕಿರಿಮುಗುಳಾಗಿ

ತಂದೇನು ನಾನು ಹೊರಗೆ; .
ಕಾದ ಕಬ್ಬಿಣದ ರಸ ಕುಡಿದು ಅದನಿಬ್ಬನಿಯು
ಕಣವಾಗಿ ಕುಣಿಸಬಲ್ಲೆ ;
ಸಾಗರವನೇ ಕುಡಿದು ಕಡೆಕಡೆದು ಜೇನ ಹನಿ
ಹನಿಯಾಗಿ ಹಣಿಸಬಲ್ಲೆ—

ಎಲ್ಲವನು ಹೂವಾಗಿ ಕರುವಿಡುವ ರೂವಾರಿ!
ಸುಗ್ಗಿ ಬೆಳುದಿಂಗಳ ಸರೋವರದ ತೀರದಲಿ
ಶೃಂಗಾರ ರಸವುಲಿವ ಕಾಮು ನಾನು ;
ಬೆಪ್ಪುಗಳು ಬಲ್ಲರೇ ಈ ರಸವಿಲಾಸವನು ?
ಬಹುವನೇಕಕೆ ಬಡಿವ ಭೀಮು ನಾನು ;
ಶೋಕ ಮೋಹವ, ವಿರಹಯಾತನೆಯ ಮರೆತವನು ;
ಸಲ್ಲಾಪಗಳ ದಳಗಳನ್ನು ತೆರೆದು,
ಪ್ರಣಯವನು ಹಣಿಸುವುದು ನನ್ನ ಬಿರುದು.

ಅಲ್ಲೊಬ್ಬನಿದ್ದ ಕೀಟ್ಸ್ ; ಇಲ್ಲೊಬ್ಬ ಪುಷ್ಪಕವಿ !
ಕಾವ್ಯಸಾಮ್ರಾಜ್ಯಕೆಲ್ಲ
ಈ ಎರಡು ದಿಗ್ದಂತಿಗಳ ಹೆಗಲೆ ಆಧಾರ,
ಕೀಟ್ಸೊ ಮೃತ ; ಅವನೇನು ಹೊರಲು ಬಲ್ಲ ?
ಎಲ್ಲ ಭಾರವು ಈಗ ನನ್ನ ಮೇಲೇ ಪೂರ್ತಿ,
ಅಂತೆಯೇ ಎಲ್ಲ ಕೀರ್ತಿ.

ನನ್ನ ಕವನಗಳಲ್ಲಿ ನಾನೆ ಲೀನ :
ಬೆಳಗು ಸಂಜೆಯ ವರೆಗು ನನ್ನ ಕಾವ್ಯದ ತಾನ
ಮಿಡಿಯುವುದು ನನ್ನ ಎದೆವೀಣೆಯಲ್ಲಿ.
ಅದರ ಮಹಿಮೆಗೆ ಮೆಚ್ಚಿ ನಾನೆ ತಲೆದೂಗುವೆನು,
ನೀವು ತಲೆಬಾಗುವುದು ಏನು ಹೆಚ್ಚು ?

ಆ ಕೋಮಲತೆಗಣ್ಣ ನಾನೆ ಬಂದಿ,
ನನ್ನ ಕಾವ್ಯಕೆ ನಾನೆ ಆದೆ ವಂದಿ!
ಉಳಿದೆಲ್ಲರೂ ಇಲ್ಲಿ ದುಷ್ಕವಿಗಳು;
ಬಿಡುವಿಲ್ಲ ಆ ಕಂತೆಗಳನೋದಲು.
ಓದೆ ನಾಲಗೆಬೇನೆ,
ಕೇಳಿದರೆ ಕಿವಿಶೂಲೆ,
ಅವರ ಪೊಗಳಿಕೆ ಕೇಳಿ
ಎದೆ ಕಾದ ಬಾಣಲೆ!

ಹೂವಿನೊಲು ಮಿದು, ಬೆಣ್ಣೆಯಂತೆ ಹದ, ಅಂಥ ಪದ
ಮಧು ಬಂದು ಹರಿಯಬೇಕು,
ನನ್ನಂತೆ ಬರೆಯಬೇಕು!
ಮೇಲುತೆರೆಗಳ ಮೇಲೆ ರವಿಕಿರಣ ಕುಣಿವಂಥ
ಲಾಸ್ಯವನೆ ಬರೆಯಬೇಕು;
ನನ್ನಂತೆ ಬರೆಯಬೇಕು!

ಗಹನ ವಿಪಿನವ ವೊಲು ಅಗಾಧಸಾಗರದ ವೊಲು
ಉತ್ತುಂಗ ಶಿಖರದಂತಿರುವ ಕಾವ್ಯ
ಕಾವ್ಯವೇ? ಅದು ಭೂತಸಂತಾನ; ಅದನಾಚೆ
ನೂಕು; ಆ ಕವಿಗಳನು ತಳ್ಳು ಹೊರಗೆ;
ತಲೆಬಾಗು ಪುಷ್ಪಕವಿ ಚರಣ ತಳಕೆ!

ಬಂದನಿಗೋ ಪುಷ್ಪಕವಿ,
ಹೇಳಿ ಪರಾಕು;
(ನಾನೆ ಸ್ವಾಮಿ, ಆ ಕವಿ!)
ನನಗೆ ಪರಾಕು!
ಕನ್ನಡಕಿನ್ನೇನು ಬೇಕು!

ಭಾರತಕೂ ಈ ವಿಶ್ವಕು
ಸಕಲ ಚರಾಚರಕೂ
ಇವನೊಬ್ಬನೆ ಸಾಕು—ಎಂದರೆ—
ನಾನೊಬ್ಬನೆ ಸಾಕು.

ಜೈ, ಜೈ, ಜೈ ಪುಷ್ಪಕವಿ ;
(ನಾನೆ, ಸ್ವಾಮಿ, ಮಹಾಕವಿ !)
ಎಲ್ಲರೊಂದೆ ಬಾಯಿಯಿಂದ
ಹೊಗಳಿರಿ ನನ್ನ ;
ಬಂದನಿಗೋ ಕವಿಚಕ್ರಿ ;
ಎರಗಿರಿ ಸಾಷ್ಟಾಂಗ !

# ಇಂಡಿಯನ್ ರಿಪಬ್ಲಿಕ್

ನೀರೊ ನೆಳಲೋ ಇಲ್ಲಿ ಎಲ್ಲಿದೆ ?
ಗಾರುಗಲ್ಲಿನ ದಾರಿಯು ;
ಬಿದ್ದ ಸಗ್ಗದ ಬೀಜವೆಲ್ಲವು
ಸುಟ್ಟು ಸಿಡಿಯುವ ಗೋರಿಯು.

ಆಸೆಮಲ್ಲಿಗೆ ಕನಸುಬಳ್ಳಿಗೆ
ಇಲ್ಲಿ ಇಲ್ಲವೊ ಆಸರೆ ;
ಉರಿವ ಬಾಣಲೆ ದೇಶ ; ಹುರಿದಿವೆ
ಹೂವು ಮಿಡಿ ಕುಡಿ ಚಿಗುರೆಲೆ.

ಮುಗಿಲ ತಾವರೆಜೇನುದೋಣಿಯು
ದೋಚುವೆದೆಅಳಿ ಎಲ್ಲಿದೆ ?—
ಕೊಳೆಯ ತುಬ್ಬುವ ಕೆಸರಿಗುಬ್ಬುವ
ಕುರುಡು ಹುಳುಸೊಲ್ಲಲ್ಲದೆ.

ದಾಸ್ಯದುರ್ದಿನದಲ್ಲಿ ಮುಡುಕಿದ
ಧುಮುಕುಬೆಳಕೂ ಬತ್ತಿದೆ,
ಮಳೆಯ ಬಿಲ್ಗಳ ಹಡೆದ ನಭಮನ
ಬಂಜರಾಗಿದೆ, ಬೀಚಿದೆ.

ಬಿದ್ದ ಕಂಬನಿ ಕುದಿದು ಕರೆವುದು
ಮೋಡವಾಡುವ ನಾಡಿಗೆ ;
ನಿಂತ ನೆಲ ಕಲ್ಲಾಗಿ ಕಾದಿದೆ
ಯಾವ ಮನುಕುಲದೀಪಗೆ ?

ಇಂದು ಹೃದಯದೊಳಿಲ್ಲವೋ ಮುದ :
ಚುಚ್ಚಿ ಬಿಟ್ಟ ಬೆಲೂನ್‌ಗಳು,
ಲಾಭಲೋಭದ ಕಾಳನಾಗದ
ದಂತ ಮೂಡಿದ ಮನಗಳು !

ಹೊಲವ ಮೇಯುವ ಜೇಲಿ ಪುಂದಾ-
ಳುಗಳು ; ತೋಳನೆ ಕುರುಬನು ;
ಕುರಿಜನದ ಕಂಗುರುಡುಬಾಳಿಗೆ
ಕಾಲನೂ ಸಹ ಕರುಬನು.

ಆನೆಮಾತಿನ ಮೇಲೆ ಮುಸಗಿದೆ
ಸೊಳ್ಳೆಕೃತಿಯ ಸವಾರಿಯು ;
ನರಿಮನದ ಹಿಮ್ಮೇಳ ನೋಡಿರಿ,
ಅದಕೆ ಕೇಸರಿಶೇವಿಯು ;

ಮುಸಕುಬೆಳಕಿನ ಗೋಡೆ ಮೇಗಡೆ
ನೆಳಲು ಥಕಥೈ ಕುಣಿವುವು ;
ಯಾವ ತಾಳವೊ ಲಯವೂ ಗತಿಯೋ
ಕುಣಿವುವೋ ದಣಿದಣಿವುವು.

ಎಲ್ಲೊ ಆಚೆಗೆ ದೂರತೀರಕೆ
ಮರಳುಕಾಡಿನ ತೀರಕೆ
ಮನವು ಬಾಯ್ಬಾಯ್ಬಿಟ್ಟು ನೆನೆವುದು
ಹೊಸಬದುಕು ಕಾಸಾರಕೆ.

ಹೊರಟ ಮಂದಿಯ ನೋಡು ದಿಬ್ಬಣ,
ಏನಿದುಲ್ಲಸದುಲ್ಬಣ :

ಜಯಜಯೆನುವ ಸಿಪಾಯಿ ಬ್ಟಾಯಿಯ
ಬಿಲದೊಳೋ ಇಲಿ ಹೆಗ್ಗಣ !

ತ್ರಾಣಗುಂದಿದ ಕಾಲು ಕೊಳೆವೀ
ಕೆಸರ ಕುಣಿ ಸಾಕೆನುವುದು :
ಕನಸುನೂಲಿನ ತುಯ್ತ ತೀರಲು
ಬೀದಿಹೆಣ ಹಲ್ಕಿರಿವುದು !

ಬಚ್ಚಲೆಲ್ಲಿದೆ ಹುಡುಕು ಮಗುವೆ,
ಗಟಾರಶೋಧನೆ ಸೊಗಸಲಿ ;
ಕೆಸರುಮೆತ್ತಿದ ಕೋಣಬಾಳಿನ
ಬಾಲ ಹಿಡಿದೋಡಾಡಿರಿ.

ದನಜನವೆ ಎಳ ಹಸುರುಹುಲ್ಲನು
ಹುಡುಕಿ ಹಾಯಿರಿ ತೋಪಿಗೆ ;
ಅಲ್ಲಿ ಹಸುಮೊಗ ನಗುವ ಹುಲಿಗಳು
ಇಹುವು ನಿಮ್ಮಯ ಕಾಪಿಗೆ.

ನಿಮ್ಮ ರಾಜ್ಯವೆ ಸರಿ ಇದಣ್ಣಾ :
ಉರುಳುಕೊರಳ ವಿಹಾರಕೆ ;
ಸುಳ್ಳು ತಟವಟ ಲಂಚ ಲಂಪಟ-
ತನದ ಗಾಣದ ಭಾರಕೆ !

ಸಾಲದೇ ಸ್ವಾತಂತ್ರ್ಯ ಸಂಪದ ?
ಅನ್ನವಿರೆ ಅದ ತಿನ್ನಲೂ,
ಇಲ್ಲದಿರೆ ಉಪವಾಸ ಸಾಯಲು
ಸತ್ತು ಸ್ವರ್ಗವನೇರಲೂ ?

ಬಿಳಿದೊಗಲ ಹುಲಿ ಇನ್ನು ಸುಳಿಯದು ;
  ಕರಿದೊಗಲ ನರಭಕ್ಷಕ
ನಿಮ್ಮ ಬಣ್ಣದ ಅಣ್ಣತಮ್ಮನು,
  ನಿಮಗವನೆ ಸಂರಕ್ಷಕ !

ಹಣದ ಮಹಲೇರುತ್ತಲಿದೆಯಗೊ :
  ಹೆಣದ ಬಣಬೆ ಬುನಾದಿಗೆ ;
ಅಸ್ಥಿಪಂಜರ ತಳಿರು ತೋರಣ
  ನಮ್ಮ ರಾಜ್ಯದ ಆದಿಗೆ.

ಸಾಕು ಘೋಷಣೆ, ಕಂಠಶೋಷಣೆ,
  ಮೆರವಣಿಗೆಯಾಡಂಬರ ;
ಕಾಯಲಾರದ ಕೈಗಳೆತ್ತಿದ
  ಬಾವುಟದ ಹುಸಿ ಮರ್ಮರ.

ಮುಚ್ಚಿ ಕಿಸುಬಾಯ್ಟಂಕಸಾಲೆಯು,
  ಗೈಮೆಚಿನ್ನಕೆ ಸರಿಸಮ
ಬರಲಿ ನುಡಿನಾಣ್ಯಗಳು ಪರಿಮಿತ ;
  ಬೇಡ ಹೆಣನುಡಿಯುಬ್ಬರ.

ಹೊಲವೊ ಮನೆ ಕಾರ್ಖಾನೆಯೋ ಚಾ-
  ವಡಿಯೊ ಶಾಲೆಯೊ ನಡೆಯಿರಿ ;
ಸತತಕರ್ಮದ ಕುಲುಮೆಗಿಳಿಯಿರಿ,
  ತನುಮನದ ಕೊಳೆ ಕಳೆಯಿರಿ.

ಇಲ್ಲಿ ಹಸುರಿನ ಹಸುಳೆ ಕಲ್ಲಿಗೆ
  ಚಿಲ್ಲುತಿದೆ ಎದೆಯೊರತೆಯ ;

## ನಡೆದು ಬಂದ ದಾರಿ

ಇಲ್ಲಿ ಮಲ್ಲಿಗೆ ಮುಳ್ಳುಕಂಟಿಗೆ
ಹಾಕಿ ನಿಂತಿದೆ ಮಾಲೆಯ.

ಜಳ್ಳುಬಗೆ ಹೊರೆ ಹೇರಿ ಮುಗ್ಗಿವೆ,
ಒಂದೊ ಎರಡೋ ಕಾಳ್ಗಳು;
ಬಲಿತ ಕಳೆಗಳ ನಡುವೆ ತಗ್ಗಿವೆ
ಒಂದೆರಡು ಮೊಳೆನನೆಗಳು.

ಆದರೂ ಓ ಗೆಳೆಯ, ಇಲ್ಲಿದೆ
ಆಸೆ ಕೊನರುವ ತೋಟವು;
ಕಲ್ಲುಮುಳ್ಳಿನ ತಳದಿ ಮಣ್ಣಿದೆ,
ಚಿಮ್ಮು ಚಿಲುಮೆಗಳಾಟವು.

ಉರಿವ ಬಾನಿನ ಕಣ್ಣು ತಣಿಯದೆ,
ತುಳುಕದೇ ಕಂಬನಿಮುಳಿ?
ಬಣಗುತೊರೆಯೆದೆ ಹಿಂಡಿ ಹರಿಯದೆ
ಬಾರದೇ ಹೊಸ ಹೊಂಬೆಳೆ?

ಕಲ್ಲ ಬಿರುಕಿನ ಹರಕು ಬಾಯಿಯು
ಅರಚುತಿದೆ ಹೊಸ ಸಸಿಗಳ,
ಹಬ್ಬಿದೀ ಹೆಗ್ಗುರಿಯ ಮರಿಗಳು
ಬಡಿಯುತಿವೆ ಗರಿಗರಿಗಳ.

ಗಾಂಧಿಪಥ ಧ್ರುವತಾರೆ ತೊಳಗಿದೆ;
ಕಾಂಬ ಕಣ್ಗಳು ಬಾರವೆ?
ಬೋನು ಪಂಜರ ಕುಹರ ಕೊಟ್ಟಿಗೆ
ಬಿಟ್ಟು ಬಾರವೆ ಬಯಲಿಗೆ?

# ಹಗೆಯು ಹಾಲಾಹಲವು !

ಬಾಳ ಹಗೆ ಹಗೆತನವು ; ಅದರ ಅಸ್ಥಿರ ಅಸ್ತಿ-
ವಾರವೇ ನವಯುಗದ ಭವ್ಯಭವನಕೆ ? ಬುದ್ಧಿ
ಅಧ್ರುವದ ಗವಿಯೊಳಿದೆ, ಧ್ರುವದ ಛವಿ, ಹಾ, ಸಿದ್ಧಿ !
ಹುರಿದ ಬಿತ್ತವನೆತ್ತಿ ಚೆಲ್ಲಿ ಕಲ್ಲಲಿ ಸ್ವಸ್ತಿ
ಎಂದು ಪೆಟ್ರೋಲ ಸುರಿದೆಲೆಲೆ ಗಿಡವಾಗಿ ನಳ
ನಳಿಸಿ ಬೆಳೆ ಮರವಾಗಿ ಎನುವೆ ಗೆಳೆಯನೆ ! ನಿಂದೆ
ಕಟಕಿ ಮೂದಲಿಕೆಗಳ ಕಣೆಗೆ ಪಡಿಗಣೆ ಬಂದೆ
ಬಹುದು : ಅಸ್ತ್ರಕ್ಕೆ ಪ್ರತ್ಯಸ್ತ್ರ ; ಗರಳಕೆ ಗರಳ !
ಗುರಿಯೆ ? ಗುರಿ ಸರಿ, ಹಿರಿದು : ಸುಖ ಸಮೃದ್ಧಿಯ ಸಫಲ
ಸಮತೆ, ಮನಮನದ ಮರುಧರೆಗೆ ಸುರಗಂಗೆಯನೆ
ತರುವ ಭಾಗೀರಥ್ಯ. ಅದಕೆ ಒಬ್ಬಗೆಯ ಬಲ
ಅರಳಬೇಕಿಬ್ಬಗೆಯ ಗೊಬ್ಬರದಿ ; ನಿನ್ನ ಛಲ
ಒಲವಿನಸಿಧಾರಾವ್ರತಕ್ಕೆ ಬರೆ ಇದೆ ಗೆಲುವು.
ಒಲವೆ ಜೀವಕ್ಕೆ ಸುಧೆ, ಹಗೆಯೆ ಹಾಲಾಹಲವು !

# ನನ್ನ ಅವತಾರ

ರಾಮನ ಬಳಿ ಇದ್ದೆ ನಾನು : ಕಂಡೆ ಕೋದಂಡದೋರ್ದಂಡ ಬಲ
ನನ್ನ ಕಣ್ಣ ಮುಂದೆಯೇ ಮೊಳೆತು ಬೆಳೆದ ರೀತಿಯು.
ನನ್ನ ಹಾಗೆ ಅವನು ಕೂಡ ಉಣ್ಣುತಿದ್ದ, ತಿನ್ನುತಿದ್ದ,
ಚಂದ್ರನನ್ನು ತಾ ಎಂದು ತಾರುಮಾರು ತೊದಲುತಿದ್ದ;
ಹೀಗೆ ಇರಲು ದೇವತ್ವದ ತರಿಸಲೀಟಿತುದಿಯನೇರಿ ಅವನ ಮನ
ಮುಗಿಲ ಚುಚ್ಚಿ ಮುಂದುವರಿದ ಆ ಮಹಾಪ್ರತೀತಿಯು
ಕಣ್ಣಾರೆ ಕಂಡೆನಯ್ಯ ; ಹೊಗಳಲೆನಲು ಆಡಲಿಲ್ಲ ಈ ನನ್ನ ನಾಲಗೆ.
ಉಳಿದೆ ನಾನು ಆಗಲೂ ಈಗ ಇಲ್ಲಿ ಕೊಳೆವೊಲು.

ಕೃಷ್ಣನೊಡನೆ ಗೋಕುಲದಲಿ ನಾನು ಕೂಡ ಬೆಣ್ಣೆ ಕದ್ದು
ಗೋಪಿಕೆಯರ ಸೆರಗ ಹಿಡಿದು ಕಾಡುತಿದ್ದೆ ನಿತ್ಯವೂ—
ಅದರೊಳೇನೊ ನಾನೆ ಅವನಿಗಿಂತ ಮೇಲು, ಸತ್ಯವು !
ಅವನೊ ಯೋಗರಾಜನಾದ, ದೊಂಬ ಸುರಿದ ಸೀರಿಸಿಂದ
ಮಾವಿನೋಟೆ ಚಿಗಿಯುವಂತೆ ಚಿಗಿತ,
ಅಬ್ಬ ಏನಚ್ಚರಿ ! ಮುಗಿಲಿಗೊಂದೆ ನೆಗೆತ !
ತಿಳಿಯದ ಮನ ತುಯ್ಯುತಿರೆ, ಇಲ್ಲಿ ಕಾಲು, ಅಲ್ಲಿ ತಲೆ,
ಅದಕೂ ಆಚೆ ನೋಟ ;
ಅಹಾ ಅದೆಂಥ ಆಟ !
ನಾನೊ ಸಣ್ಣ ಕಲ್ಲಿನಂತೆ ಕೆಸರ ನಡುವೆ ಉಸಿರು ಕಟ್ಟಿ
ಪಾಚಿ ಕಟ್ಟಿ ಕಾಯುತಿದ್ದೆ, ಭೋಗರಾಜ, ರೋಗರಾಜ,— ಈಗಿನಂತೆ
ಆಗಲೂ.

ಬುದ್ಧನ ಖಾಸಾ ಶಿಷ್ಯ ಯಾರೆಂಬಿರಿ, ನಾನೆ ನಾನು !
' ಬುದ್ಧಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ ',
ಎಂದು ಒರಲಿ ನಡೆದರಲ್ಲ ಅವರ ಮುಂದಾಳೆ ನಾನು :

ಹುಟ್ಟಿಗಿಂತ ಮುನ್ನವೇ ರಾಜತ್ವವ ಬಿಟ್ಟವನು,
ಬೋಧಿವೃಕ್ಷದಡಿಯೆ ಒಮ್ಮೆ ಮೂಗು ಮುಚ್ಚಿ ನೆಟ್ಟವನು,
ನಾನು ಕೂಡ ಹೆಂಡತಿಮಕ್ಕಳನು ಬಿಟ್ಟುಕೊಟ್ಟವನು,
ಅವನ ಹಾಗೆ—
ಅವನೊ ಬುದ್ಧ ಸಿದ್ಧ ಜಗತ್ಪ್ರಸಿದ್ಧನಾಗಿ ಎದ್ದಿದ್ದ:
ಅವನ ಮುಖದ ಕಾಂತಿಯೇನು, ಉಗುವ ಆ ಪ್ರಶಾಂತಿಯೇನು!
ಕೆಂಡದ ಬಳಿ ಇದ್ದು ಕೂಡ ಈ ಇದ್ದಲು ಇತ್ತು ಹಾಗೆ—
ಆಗ ಈಗಿನಂತೆಯೇ ಹೊತ್ತದೇ ಉರಿಯದೆ.

ಗಾಂಧಿ ಬಂದ. ಅವನ ಹಿಂದೆ ಮೊದಲು ಬಂದ ಭೂಪನು
ನಾನೆ. ಅವನ ಕೊರಳಿಗೇರಿದಂಥ ಮೊದಲ ಹಾರವು
ನನ್ನದೇ. ಖಾದಿಯುಡಿರಿ ಎಂದನೋ ಇಲ್ಲವೋ
ಖಾದಿ ತೊಟ್ಟ ಧೀರ ನಾನು! ರಾಟೆ ಹಿಡಿದು ನೂತೆನಯ್ಯ,
ಅದರೊಳಿಲ್ಲ ಸಂಶಯ. ಹಾಗು ಹೀಗು ಜೈಲಿಗೂ
ನುಸುಳಿ ಹೋದೆ ನಿಶ್ಚಯ. 'ಗಾಂಧಿಗೆ ಜೈ, ಗಾಂಧಿಗೆ ಜೈ'
ಕೊರಳು ಬಿರಿವತನಕವೂ ಕಿರಲಿದೆ ನಾ ಇಷ್ಟು ದಿನ;
ಈಗ ಹೋದನವನು. ನಾನು ಮಾಡಲೇನೊ ತಿಳಿಯದು!
ಅವನು ಒಂದು ಸಲವೊ ಏನೊ ಮಾಂಸ ತಿಂದು ಅತ್ತನು;
ದಿನದಿನವೂ ಅದನೆ ತಿಂದು ಅನುಗಾಲವು ಅಳುವೆ ನಾನು!
ಒಂದು ಸಲವೊ ಏನೊ ಅವನು ಸುಳ್ಳು ಹೇಳಿ ಅಳಲಿದ;
ನನಗೊ ದಿನಾ ಅದೇ ಕೆಲಸ, ಅದೇ ಅಳಲು ಪ್ರತಿದಿನ.
ಅವನೋ ಮಹಾತ್ಮನಾದ; ಅರಳಲಿಲ್ಲ ನನ್ನ ಮನ.
ನಾನು ಅವನು ಒಂದೆ ಲೋಹ,
ಕಬ್ಬಿಣ–ಕರಿ–ಕಬ್ಬಿಣ.
ಯಾವ ರಸವು ಸೋಂಕಿತವನ?
ಯಾವ ಬೆಂಕಿ ತಾಕಿತವನ?

ಸಾಯುವಾಗ ಎಂಥ ಗಟ್ಟಿ ಚಿನ್ನವಾಗಿ ಸಾಗಿದ!
ನಾನು ಮಾತ್ರ ಆಗ ಹೇಗೋ ಹಾಗೆಯೇ ಈಗಲೂ ;
ಆರೆಂದರೆ ಹಿಗ್ಗಲಿಲ್ಲ, ಮೂರೆಂದರೆ ಕುಗ್ಗಲಿಲ್ಲ :
ನಾನಚ್ಯುತ, ನಾ ನಿರ್ಜರ, ನಾನೆ ಅದ್ವಿತೀಯ ;
ಒಂದೆ ರೀತಿ, ಒಂದೆ ನೀತಿ, ಒಂದೆ ಸಮ, ನೆಲಮಟ್ಟ—
ಅರಿತಿರೇನು ನೀವು ನನ್ನ ಹೆಬ್ಬಾಳಿನ ಗುಟ್ಟ !

# ನಾಗರಿಕತೆ

ನಮ್ಮ ನಾಗರಿಕತೆಯ ಕತೆ ಹಿರಿದು, ಬಲು ಹಿರಿದು :
ಒಡಕು ಮಡಕೆಗೆ ತುಂಬುತಿರುವ ಬಣ್ಣದ ನೀರು,
ನೀರು ಕಣ್ಣಿಗೆ ಸೊಗಸು ; ಅಲ್ಲಿ ಮಳೆಬಿಲ್ಲುಗಳ
ಜಲ್ಲಿ ; ಮಿಂಚಿನ ಬಳ್ಳಿ ಕತ್ತಲೊಡನುಯ್ಯಾಲೆ-
ಯಾಡುತಿದೆ ; ತಳದ ಹಾಲಾಹಲದ ಮೇಲಮೃತ
ಬುರುಗು : ಓ, ಇದೊ ನೋಡು ಮಡಕೆ ಬರಿದೋ ಬರಿದು.

ಕರಗಿ ಕಾರ್ಮುಗಿಲು ಧುಮುಕುತ್ತಲಿದೆ ತೊರೆ ಶಿಖರ-
ದೇರಿಂದ ಕೆಳನಾಡು ಬಾಯ್ದೆರೆದು ಸುಯ್ಯುವೆಡೆ,
ಬಂಡೆಬಂಡೆಯ ಚಾರುಗುಪ್ಪೆಯಲಿ ಕುಪ್ಪಳಿಸಿ
ದಡದಡಕೆ ನಗುನಲವು ಬೆಳೆಕಳೆಯ ಉಲ್ಲಾಸ
ನೀಡುತಿದೆ. ಬಂತಿದೋ ಬಯಲು, ಆ ಅದೆ ಕಡಲು !
ನಡುವೆ ಕುದಿ ಮರಳು ಬಾಯ್ದೆರೆದು ಬುಸುಗುಟ್ಟಿ ಬರೆ
ಇಳಿಯಿತಹ ಜೀವನಾಧರವೆ ರಸಾತಳಕೆ.

ಸಂಜೆ ತಂಗಾಳಿ ಬಂದಾಡುತಿರೆ ಪ್ಯೆಯೆಲ್ಲ
ಮುಳ್ಳುಮುಳ್ಳಾಗಿ ಥಳಥಳಿಪ ತಂಗೊಳದ ಬಳಿ
ಕಲಕಲ ನಿನಾದರಸತಂದ್ರಿಯಲಿ ಮೈಮರೆತು
ಪಶ್ಚಿಮಾಂಬರದರುಣ ರಾಗರಥದಲಿ ಕುಳಿತು
ಗಂಧರ್ವಲೋಕ ಕಿನ್ನರಿಯ ನೂಪುರಪುರದ
ಬೀದಿಯಲಿ ಬೀದಿವರಿದಿರೆ ಕನಸು ಕಸದೊಳೂ
ರಸವ ಹಿಳಿದುಂಬೆನೆಂಬನು ನಮ್ಮ ತರುಣ ಕವಿ ;
ನಂಬುವೆವೊ ? ಅಗೊ ಹಸಿವೆ ದಾರ ಜಗ್ಗುತ್ತಲಿದೆ ;
ಇಳಿಯುತಿದೆ ಕಲ್ಪನೆಯ ಮುಗಿಲಿಂದ ನೆಲದ ಕಡೆ

ಗಾಳಿ ಪಟ. ಮನೆಗೆ ಬಂದೊರಗುವನು ಹುಳುಹಿಡಿದ
ಜಂತಿಯಡಿ; ಕಮಟು ಚಾಪೆಯ ಮೇಲೆ ಸೊಳ್ಳೆಯುಲಿ!

ವೇದಿಕೆಯ ಮೇಲೆ ವೇಷವೂ ಕಾಣದತಿಗೂಢ
ತತ್ತ್ವಗಳ ಹೊನ್ನ ಬಲೆ ಬೀಸುವನು ವಕ್ತಾರ;
ವೇದಿಕೆಯನಿಳಿದು ರೂಪಾಯಿ ಆಣೆ ಕಾಸುಗಳ
ದಿಗ್ವಿಜಯಕ್ಕೈದುವನು; ಒಳಗೆ ಹುಳುಹಿಡಿದಂಥ
ಮರದ ಹೊರತೊಗಟೆ ಹಸುರೋ ಹಸುರು, ನೋಟಕ್ಕೆ
ತಂಪು, ಬಲುಸೊಂಪು; ನೆಗಡಿಯಾದವನೊಬ್ಬ
ಬಚ್ಚಲಿನ ಬಳಿ ಕೂಡ ಕೂತು ತೂಕಡಿಸುತ್ತ
ಕಂಪುಗಳ ಕನಸಿನೇಣಿಯನೇರಿ ಮೇಲೇರಿ
ನಕ್ಷತ್ರಕುಸುಮಗಳ ಬಳಿಯೆ ಮರಿದುಂಬಿಯೋ
ಅರಗಿಳಿಯೊ ಆಗಿ ಆಡಲುಬಹುದು; ಮಳೆಬಿಲ್ಲಿ-
ನಲ್ಲಿ ತೂಗಾಡುತ್ತ ಗುಡುಗುಸಿಡಿಲಿನ ರಭಸ
ಸುಳ್ಳುಸುಳ್ಳೇ ಎಂದು ಮೈಮರೆತು ಇರಬಹುದು.

ಹುಲಿ ಚಿರತೆ ಪೊದೆಯಲ್ಲಿ; ಚಿಗರೆಕಡವೆಗಳಾಟ
ಬಯಲಲ್ಲಿ; ನೀರು ಕುಡಿಯಲು ಬಂದು ತೊರೆಯ ಬಳಿ
ಕೊಳೆವ ಮಾಂಸದ ರಾಶಿ. ಇನ್ನೆಲ್ಲಿಯೂ ಕಾಣ-
ದಂಥ ಹೊಂಬೆಳಕು ಕುಡಿ ಕುಣಿವ ಹಣತೆಗಳಗೋ
ಮುಂದಿನ ಚರಂಡಿ ಬಳಿ ಆಡುತಿವೆ; ಬಿರುಗಾಳಿ
ಬೀಸಿ ಬರೆ ಬೆಳಕು ಆರಲು ಕಾಲ ಬೇಕೆಷ್ಟು?
ಬಳಿಕ ಬರಿ ಹಣತೆಗಳು, ಬರಿ ಮಣ್ಣ ಭಣಿತಗಳು!—
ಆ ಬಳಿಕ ಆರಿಹೋದಂಥ ಬೆಳಕಿನ ಕನಸು
ಆಗಾಗ; ಅದರ ಬಣ್ಣನೆ ಕಾವ್ಯ; ಅದರ
ಚಿಂತನೆ ಯೋಗ; ಅದು ಇದೆ ಇಲ್ಲಿ ಅದರಲ್ಲಿ
ಇದರಲ್ಲಿ ಎಂಬಾತ್ಮವಂಚನೆಯೆ ಭೋಗ.

ಘೋರ್ಗರೆಯುತಿರೆ ಕಡಲು ಮರೆತದನು ಮರಳಲ್ಲಿ
ಕಟ್ಟಿ ಮನೆಕೋಟೆಗಳ, ನಾಲ್ಕು ನಿಟ್ಟಿಗು ಕೂಡ
ಇಟ್ಟು ಕಾವಲ ನನ್ನ ಮನೆ ಇಲ್ಲಿ ಗೆರೆಯಿಾಚೆ
ಅವರಾಚೆ ನಿನ್ನ ಮನೆ ಎನ್ನುವುದು ; ಆ ಆಚೆ
ತನ್ನದಾದರೆ ಮೇಲೊ ಏನೊ ಎಂಬಳಿಯಾಸೆ
ಕುದಿಸೆ ನೆತ್ತರ ಬಿಲ್ಲು ಬಾಣವನೊ ಗುಂಡನೋ
ಬಾಂಬನೋ ಎಚ್ಚು ಹುಚ್ಚಾಡುವುದು ; ಈ ಆಟ
ನೋಟಕ್ಕೆ ಸೊಗಸುವುದು ; ನೆತ್ತರಿನ ಹೊಳೆಯಲ್ಲಿ
ಕೊಚ್ಚಿಹೋದರೆ ತಾನೆ ಏನು ಮನೆ ಮಠ ಕೋಟೆ ?
ಕಡಲಲ್ಲಿ ಮೊರೆಯುವುದು, ಆ ದಿಗಂತದ ಹುಲುಸು
ಹೊಲದಿ ಬಿರುಗಾಳಿ ಬೀಜಗೆಳು ಮೊಳೆಮೊಳೆಯುವುವು ;
ಈ ಇಲ್ಲಿ ಸುರಿದ ನೆತ್ತರ ಲೀಲೆ ಕಡಲ ಕೈ
ಒರಸುವುದು ; ಮತ್ತೆ ಮರಳಲಿ ಮನೆಗಳೇಳುವುವು,
ಬೀಳುವುವು ; ನಲವೊಲವು ನಗು ಸರಸ ಪರಿಹಾಸ
ಕಣ್ಣುಮುಚ್ಚಾಲೆಯಾಡುವುವು ; ಮತ್ತೆ ಮೊರೆದೇಳುವುದು
ಹೆಮ್ಮಾರಿಗೌತಣವನಿಕ್ಕಿ ನೆಕ್ಕುವ ಚಪಲ.

ದಿಟವಯ್ಯ, ನಿಜ ಮಾತು ; ನಮ್ಮ ನಾಗರಿಕತೆಯ
ಅಕ್ಷರಾಭ್ಯಾಸ ಉಲ್ಲಾಸಕರ : ಬರೆದು ಮೊದಲ ಅಕಾರ
ಅದನೆ ಅಳಿಸುವುದು ಮತ್ತದನೆ ಬರೆವುದು ಹೀಗೆ
ನಮ್ಮ ಗತಿ ಪ್ರಗತಿ ; ಮುಂದಕೊಂದಡಿಯಿಟ್ಟು
ಹಿಂದಕೊಂದಡಿಯಿಡುವ ಮನದ ಸಮತೂಕವಿದು.
ಸುತ್ತುಮುತ್ತಲ ಮುಳ್ಳುನೆಲದಿ ಈ ಎಳಗರಿಕೆ
ಎತ್ತಿ ತಲೆಯನು ಗಾಳಿಗೊಲ್ಚಿವ ಮೊದಲೇ ತುತ್ತು
ಒತ್ತೊತ್ತಿ ಬರುವ ಕತ್ತಿಗೆ ; ಕೋಡುಗಲ್ಲೆರಡು—
ಒಂದನಡರುತ್ತಲಿನ್ನೊಂದನೇ ಕೋರುವುದು ;

ನಡುವೆ ಸೀಡಿದ ಮಹಾಕಂದರದ ದೆಯ್ಯುಮ್ಮೈ
ನೋಡುವುದು ; ನೋಡಿ ಹಾಡುವುದು ; ಅದನೆಂತಾರೆ
ಕೂಡಿಸುವೆನೆಂಬಚಿಂತ್ಯದ ಚಿಂತೆ ಚಿತೆಯಲ್ಲಿ
ಉರಿದು ಹೋಗುವ ಗಂಧಹೀನ ಕೊರಡೀ ಬರಡು
ಬಾಳು. ಉಂಟೆ ಹೇಳಿರಿ ನಮ್ಮ ನಾಗರಿಕತೆಗು ಮಿಗಿಲು ?

# ಹೊಸಗನ್ನಡದ ಹಾಡು

ಇಂದು ಕೂಡ ಆಗದೆ,
ಕನ್ನಡವೊಂದಾಗದೆ ?
ಭೇದದ ಹುಳಿ ನೀಗದೇ,
ಕಾಯಿಮನ ಮಾಗದೇ,
ಒಮ್ಮತದೊಗ್ಗಟ್ಟಿನ ಫಲ
ನಮ್ಮ ಬಾಳ್ಗೆ ಬಾಗದೆ ?
ಆಗದೇ, ಹೋಗದೇ ?
ಕನ್ನಡವೊಂದಾಗದೆ ?

ಎಂಥ ಕನಸು ಕೋರಯ್ಸಿತು ಅಂದು ನಮ್ಮ ಮನದಲಿ,
ದಾಸ್ಯದ ದುರ್ದಿನದಲಿ :
ಕಾರ್ಮೋಡದ ಮೊಟ್ಟೆಯೊಡೆದದೆಂಥ ಮಿಂಚು ಚಿಗಿಯಿತು,
ಮನಮನಕೂ ನೆಗೆಯಿತು !
ಒಂದಾಗಲು, ಮುಂದಾಗಲು ತುಡಿದು, ತೋಳ ಚಾಚಿ, ನಕ್ಕು
ನುಡಿದು ನಡೆದು ಬರುತಿದ್ದರು ಕನ್ನಡನುಡಿ ಮಕ್ಕಳು ;
ಕಾವೇರಿ ಅತ್ತ ಕೃಷ್ಣೆಯೆಡೆಗೆ ಕೈಯ ಚಾಚಿ,
ಆ ಅರಬ್ಬಿಕಡಲ ರುದ್ರಗೀತ ತಬ್ಬಿ ಬಾಚಿ,
ನಿಂತ ನೆಲವೆ ಕೆರಳಿ ಅರಳಿ ಮಹಾಕ್ಷೇತ್ರವಾಗಿ
ಸುಖಶಾಂತಿಯ ಮುನ್ನಡೆನುಡಿ ಗೋಪುರ ತಲೆತೂಗಿ—
ಅಹಾ, ಅಂಥ ಬಸಿರಿಮುಗಿಲಿ ಚೆದರಿ ಬೆಳ್ಳಗಾಗಿ
ಬಂಜೆ ನಾಡು ಕಾಯುತ್ತಿದೆ ಹೊಸಬೇಸಗೆ ತಾಗಿ.

ನಮ್ಮ ಕನಸುಸಸಿಯ ಬೇರ ಕಡಿವ ಹುಳುಗಳೆಲ್ಲಿ ?
ನಮ್ಮ ಜೀವರಸದ ಹೊನಲ ಕುಡಿವ ಕಟುಕರೆಲ್ಲಿ ?

ನಾಲಗೆಯಲಿ ಕನ್ನಡಜೇನುಗುವ ಗರಳಚಿತ್ತರ,
ಕನ್ನಡದೆದೆಶೂಲವಾಗಿ ನಿಂತ ಮದೋನ್ಮತ್ತರ
ಹುಡುಕು ಕೊಳ್ಳಿ ಹಿಡಿದು, ಸುಡು ಕಚ್ಚ ಬರುವ ಕಣಜವ,
ಮನೆಯೊಳಗೇ ಮರಸುನಿಂತ ಚುಚ್ಚುಹಗೆಯ ಬೀಜವ.

ನಾಯಕಕಪಿಗಣದ ಕುಚೇಷ್ಟೆಗಳ ಮೂಕಗುದ್ದು
ಸಹಿಸೆವಿನ್ನು, ನಮ್ಮೊಳಗಿದೆ ಎನ್ನಿ ಅದಕೆ ಮದ್ದು :
ಸಮಭಾವದ ನೇಗಿಲ ಹಿಡಿದುತ್ತು ಹರಗಿ ಬನ್ನಿ,
ಪಂಪರನ್ನರೆದೆಯ ಸುಧೆಯನೆತ್ತಿಮೊಗೆದು ತನ್ನಿ ;
ಕನ್ನಡ ನವತರುಣಗಣದ ಕಂಠ ಕೋಟಿ ಕೋಟಿ—
ಕನ್ನಡನವಧರ್ಮವಾಣಿ ಎದೆತಳಕ್ಕೆ ನಾಟಿ—
ನೊಳಗಲಿ ಹೊಸಗನ್ನಡತನ ವೀರಧೀರ ಧಾಟಿ :

ನನ್ನ ನಿನ್ನ ಕನ್ನಡ,
ಎಲ್ಲ ಜನದ ಕನ್ನಡ :
ಈರ, ಬೋರ, ಭಟ್ಟ, ಶೆಟ್ಟಿ,
ಕೂಲಿಗಾರ, ರೈತರ ;
ಸುಸಂಸ್ಕೃತರ, ಅಸಂಸ್ಕೃತರ,
ಮಾನ್ಯರ, ಸಾಮಾನ್ಯರ ;
ಈ ನೆಲ ಈ ನುಡಿ ನುಡಿಸುವ
ಎಲ್ಲ ಎಲ್ಲ ಬಾಯಿಯೂ ;
ಮಾಗಲೆಂದು ಕಾದಿರುವೀ
ಎಲ್ಲ ಎಲ್ಲ ಕಾಯಿಯೂ
ಕನ್ನಡವೋ ಕನ್ನಡ.

ನಮ್ಮ ಉಸುರು, ನಮ್ಮ ಕಸುವು ಕನ್ನಡ ;
ನಮ್ಮ ಹೆಸರು, ನಮ್ಮ ಕಸುಬು ಕನ್ನಡ—

ಕನ್ನಡವಿದು ಕನ್ನಡ,—
ಬನ್ನಿ ನಮ್ಮ ಸಂಗಡ ;
ಒಂದಾಗುವ ಎಂದೆದ್ದರೆ ತಡೆವ ಬಂಟರೆಲ್ಲಿ ?
ಕನ್ನಡಜನ ಕವಿದೆದ್ದರೆ ಸಿಲುವ ಗಂಡರೆಲ್ಲಿ ?

ಆಗುತಲಿದೆ, ಆಗಿದೆ—ಆಗೊ
ಕನ್ನಡವೊಂದು :
ಬನ್ನಿರಣ್ಣ ತಮ್ಮ ಎಂದು
ಎದೆಯೆ ಕೂಗುವಂದು ;
ಮಾತು ಸಾಕು, ಅರ್ಥವಾಗುವ
ಮತಿಯ ಬಿಂದು ಬಿಂದು
ಬಿದ್ದರೊಂದು ಬಹರು ನೂರು
ಲಕ್ಷ ಹಿಂದು ಮುಂದು.

# ನಾನಲ್ಲ ಬೇರೆ

ನಾನಲ್ಲ ಬೇರೆ, ನೀವಲ್ಲ ಬೇರೆ—
ಬೇರೊಂದೆ; ಕೊಂಬೆ ಕೊಂಬೆ,
ನೂರೊಂದು ಟೊಂಗೆರೆಂಬೆ;
ಗೆಲ್ಲು ಗೆಲ್ಲು ಎಲೆ ಎಲೆಯೂ ಚಂದ,
ಟಿಸಳು ಎಸಳು ಕುಡಿ ಮಿಡಿ ಬಿಸವಂದ;
ಒಂದೇ ಶ್ರುತಿ, ನೂರೊಂದಿದೆ ಛಂದ:
ಇದು ಮೃದು, ಅದು ಅಹ, ಕಠೋರಬಂಧ—
ಮನುಕುಲ ಅಗಾಧಮಾಕಂದ,
ನಾನೊಂದು ಹೂವು ಸ್ವಚ್ಛಂದ!
ನಿಮ್ಮಿಂದ ನನ್ನ ಆನಂದ;
ನಿಮಗಾಗಿ ನನ್ನ ಈ ಗಂಧ.
ಬರುವಂಥ ಹಣ್ಣಿಗಾಗಿ
ನಾವೆಲ್ಲ ನೋಂತು ಬೀಗಿ,
ಕಾಯೋಣ ಬಿಸಿಲು ಬೇಗೆ,
ಮಿಾಯೋಣ ಬೆಳ್ಳಿಮಳೆಗೆ—

—ನಾನಲ್ಲ ಬೇರೆ, ನೀವಲ್ಲ ಬೇರೆ!

# ಹೊಸ ಗಾಳಿ

ಎತ್ತುತಿದೆ ಮನವ ಮತ್ತೂ ಮತ್ತು ಹೊಸ ಗಾಳಿ :
ಹಾಯಿ ಪಟಪಟಿಸುತಿದೆ; ಕೂವೆಮರ ಬಿಲ್ಲಾಗಿ
ಬಾಗುತಿದೆ; ನೀಲಸಾಗರದ ತುಂಗತರಂಗ
'ಅತ್ಯತಿಷ್ಠದ್ದಶಾಂಗುಲ'; ಜಲದ ಉದ್ವಿಗ್ನ
ಉಸಿರು ಬುಸುಗುಟ್ಟುತಿದೆ; ವೊಗಬಿಗಿದ ಕಾರ್ಮುಗಿಲು
ಹುಬ್ಬುಗಂಟಿಕ್ಕುತಿದೆ; ಕಡಲ ಕಾಕಸಮೂಹ
ಸೊಕ್ಕಿ ಕಾಕಾ ಎಂದು ಪಟದ ಕಣ್ಣಿಯ ಕಣ್ಣ
ಕುಕ್ಕುತಿವೆ—ಹೊವ್ವು ಬಿತ್ತೋ ಬಿತ್ತು, ಆಗಸದ
ಮುತ್ತು, ಸವಿಮುತ್ತು—ಉದ್ದಂಡ ಬಂಡೆಯ ಚಂಡೆ
ಬಾರಿಸುತ್ತಿದೆ ಸುತ್ತುಮುತ್ತು, ಅಬ್ಬರತಾಳ
ಹಾಕಿ ಹೋಯೆಂದು ಭೋಯೆಂದು ಹೊಯ್ದಾಡುತಿವೆ
ಹೆದ್ದೆರೆಯ ಹೆಗಲಿನುದ್ವಿಗ್ನ ಮಕ್ಕಳು, ಅಹಾ,
ನೀರಕನ್ಯೆಯರು, ಜಲದೇವಕನ್ಯೆಯರು; ಅಲ-
ಕಾಳಿಕಾಳಿಮೆ ಬೆರೆತ ನೊರೆಯ ಕುಕ್ಕುದಿಯಲ್ಲಿ
ಉಕ್ಕುತಿದೆ ತಳದ ತಳವೂರಿದುರಿನಗೆ; ಮೇಲೆ
ಮುಗಿಲ ಗುಮ್ಮನ ಮುಸುಕನಗಗೊ ನಸುವೇ ಸರಿಸಿ
ನೋಡುವರು ನಕ್ಷತ್ರಕನ್ಯೆಯರು; ಕಡಲಾಚೆ
ಕೂಗಿ ಕರೆವರು ನೀಲಮಂಚಕ್ಕೆ : ಬಾ ಅಣ್ಣ,
ಬಾ ತಮ್ಮ! ಹರಿಯಿತೇ ಪಟ? ಅಹಹ, ಕೂವೆಮರ
ಮುರಿಯಿತೇ? ಕೈತಟ್ಟಿ ನಕ್ಕವೇ ದಿಕ್ತಟ?
ಅಂಜಲೇತಕೆ—ಸಾವು ಬದುಕಿಗಿಂತಲು ಬೇಳೆ?

ಮೊನ್ನೆ ಹೇಗಿತ್ತು ಈ ಪಟ? ಮುದುರಿ ಜೋತಾಡಿ
ಗಾಳಿಯೂದದ ಬೆಲೂನಿನ ಸುಕ್ಕುಸೋಬಾನೆ
ಮುಸುಗುಟ್ಟುತಿತ್ತು; ಹೆಣಬಟ್ಟೆ ಮುಪ್ಪುರಿಸುತ್ತಿ
ನಾರಿತ್ತು; ಬೈಲ ಬೆಚ್ಚನ ತಲೆಯ ರೂಮಾಲು
ಕಾಗೆ ಹಿಕ್ಕೆಯ ಕುಕ್ಕೆಯಾಗಿ ಬಿಕ್ಕುತಲಿತ್ತು.
ಇಂದಹೋ ಹೊಸಗಾಳಿ ಒತ್ತುತಿದೆ ತಿದಿತುದಿಯ;
ಉರಿದು ಹಣ್ಣಾಗಿಹುದು ಕೆಂಡ; ಉಬ್ಬಿದೆ ಹಾಯಿ.
ಅಬ್ಬಬ್ಬ ಎಂದು ತಬ್ಬಿಬ್ಬಾಗಿ ಆಕಾಶ
ನೆಲವು ಕಡಲೂ ದಿಗ್ದಿಗಂತ ಕಂಭಿಸಿ ನಿಂತು
ಕ್ರೋಶಕ್ರೋಶಗಳಾಚೆ ಮೂಕ ಕೋಕಿಲ ಕಂಠ
ತುಂಬಿ ಹರಿಯುತ್ತಲಿದೆ. ಬಾ, ಬಾರೊ ಈ ಎಡೆಗೆ;
ಕೆಸರು ಗುಮ್ಮಿಯ ಕೊಳಚೆಬಾಳು ಬೇಡೋ ಬೇಡ.
ಮಲಗಿದರು ಸರಿಯೆ ಶರನಿಧಿಯ ತಳತಲ್ಪದಲಿ
ನಡೆದು ಬಿಡು ಸತತಸಂಚಾರಸಂಕಲ್ಪದಲಿ.

# ಮದಗಜ

“ ಜೋತ, ಮಗೂ, ಮದವಾರಣಮುನ ; ಕ್ಷಣ
ವಿನೋದವಲ್ಲೋ ಜೀವನ :
ಮಾರಿಮುಸಣಿ ಶಿವ ಸಿರ್ರ್ರಾಕಾರಭರ
ವನಸಂಚಾರ ಚಿರಂತನ.

“ ಹೆಜ್ಜೆಹೆಜ್ಜೆಗೂ ತಿವಿವಂಕುಶ ಕಶೆ,
ಚಿರಾನುಭವಿ ಮಾವಟಿಗ.
ಬೆಟ್ಟತಪ್ಪಲಿಗೆ ದರೀಕುಹರಕೆ
ಹೋಗುವಾಸೆ ಮೋಘ !

“ ನಿಲ್ಲು ಇಲ್ಲೆ ಈ ಹಿಂಡಿನಲ್ಲೆ; ಅದು
ಎಂತೊ ಅಂತೆ ಸಾಗು ;
ಹೊಸ ಪಂಥ ತೊಟ್ಟೆ ನೀ ಕೆಟ್ಟೆ; ಲೋಕ ತಾ
ಹೇಗೋ ಹಾಗೆ ಸಾಗು.”

“ ಕಾಣನಿಲ್ಲಿ ಮಾವಟಿಗ, ಅಂಕುಶ
ಎಲ್ಲಿದೆ ? ನಾ ನಿಶ್ಶಂಕ :
ಸೊಂಡಿಲೆತ್ತಿ ಕಾಲಿಟ್ಟರೆ ಪುಡಿ ಪುಡಿ
ನಿರಾಯಾಸ ಆತಂಕ.

“ ಹೆಜ್ಜೆ ಮೂಡದುದು ಇದೆ ಕನಸಿನ ಮಧು
ಸುರಿವ ವೀರಪಂಥ ;
ಇದೇ ಗಳಿಗೆ ನಾ ನಡೆದೆನಲ್ಲಿಗೇ,
ಒದರಬೇಡ ವ್ಯರ್ಥ.

" ಬಾಳೆತೋಟ ತೋಳಾಡಿಸಿ ತೂಗಿದೆ,
ಕಬ್ಬಿನ ಹೊಲ ತುಟಿ ಮಾಗಿದೆ ;
ಅಬ್ಬಿಯ ಬಳಿ ಮೈಯುಬ್ಬಿದೆ ಗುಬ್ಬಿ,
ಪಾರಿವಾಳ ಗರಿ ಬಿಚ್ಚಿದೆ.

" ವನವನದಲ್ಲೂ ಏನೊ ವಿಶೇಷ,
ಮರಮರಕ್ಕು ಆವೇಶ,
ಪರಿಷೆ ಸೇರುತಿದೆ ಕೊಳಕೊಳದೆಡೆ ; ನಾ
ಹೋಗಬೇಕು ಈ ನಿಮಿಷ."

# ಇಂದು ನಮ್ಮ ನಾಡು — ೧

ಇಂದು ನಮ್ಮ ನಾಡು ಜಾತ್ರೆ ಗಜಿಬಿಜಿ ಕಳೆದು
ಪಡಖಾನೆಯಲಿ ಪಟ್ಟ ಜನದ ಪಾಡು :
ಬುಂಡೆ ತುಂಬಿದೆ ಹೆಂಡ ; ಕೆಸರು ತುಂಬಿದೆ ಹೊಂಡ ;
ಕಂದಿ ಕರಕಿದೆ ಉರಿದ ಕೆಂಪು ಕೆಂಡ.

ತೇರ ಹಿಡಿದೆಳೆದ ಕೈ, ಬಾಗಿ ಪೊಡಮಟ್ಟ ಮೈ,
ಭಕ್ತಿ ತುಳುಕಾಡಿದ್ದ ಅಂತರಂಗ
ಈಗ ನರಕಕ್ಕೆ ಕೈಮುರ, ಕರಡಿಗುಹೆ, ಘೋರ
ರಾಕ್ಷಸತೆ ಭೋರಿಡುವ ನಾಟ್ಯರಂಗ.

ಬೀದಿಬೀದಿಯ ಸುತ್ತಿ ಬಂದು ಹೂವಿನ ತೇರು
ಹೇಮಂತದಶ್ವತ್ಥದಂತೆ ನಿಂತು
ಗುಡಿಯ ಮುಂಗಡೆ ಶೂನ್ಯ ಮನಕೆ ಹೃದಯಕೆ ನೆಟ್ಟ
ಕಂಕಾಲದ ಪತಾಕೆ ಸುಯ್ಯುತಿಹುದು.

ಉತ್ಸವದ ಮೂರ್ತಿ ರಥವಿಳಿದು ದೇವಾಲಯದ
ಮೂಲೆ ಕತ್ತಲಿನಲ್ಲಿ ಮುಗ್ಗುತಿಹುದು ;
ಬಾವಲಿಯ ಹಿಕ್ಕೆಗಾಗಿದೆ ಕುಕ್ಕೆ, ಇನ್ನೆಂದು
ಜಾತ್ರೆ ? ನಿಟ್ಟುಸಿರನ್ನು ಸೂಸುತಿಹುದು.

ಮೂಲವಿಗ್ರಹ ಮಾತ್ರ ಅಚಲ ; ಕಲ್ಲಿನ ಘೋರ
ಸ್ಥೈರಾಶ್ಯವನು ಹಲ್ಲಿ ಲೊಚಗುಟ್ಟಿತು.
ಬಾವಲಿಯ ಕೀಚು ನಿರ್ಮಾಲ್ಯದುರ್ಗಂಧಕ್ಕೆ
ನಾಲಗೆಯನಿತ್ತು ಪಡಿನುಡಿಗೊಟ್ಟಿತು.

ಜಾತ್ರೆ ಬರುವುದು ; ಜಾತ್ರೆ ಕಳೆವುದಕಟಾ ! ತೇರು
ಅರಳುವುದು ಮತ್ತೆ ಬೋಳಾಗುತಿಹುದು ;
ನರರ ಕಂಠದಿ ಬಾನಘಂಟೆ ಬಾರಿಸುತೊಮ್ಮೆ
ಬಳಿಕ ಮಾರಿಯ ಡೋಲು ಬೊಬ್ಬಿರಿವುದು.

ಮೂಲವಿಗ್ರಹವೆ ಉತ್ಸವಮೂರ್ತಿಯಾಗಿ ಹೊರ-
ವಂಟು ರಥದಲಿ ಸದಾ ಸೊಗಸುವನಕ,
ದಿನದಿನವು ಜಾತ್ರೆಯುತ್ಸಾಹ ಮೊರೆಯುವ ತನಕ
ತೊಲಗುವುದೆ ಹೇಳು ಆ ಮೃತ್ಯುಪಥಕ ?

# ಇಂದು ನಮ್ಮ ನಾಡು — ೨

ಕತ್ತಲಿನ ನರದಲ್ಲಿ ತತ್ತರಿಸಿ ತೊಳಲುತಿದೆ
ಬಳ್ಳುಗಳ ವಿಕರಾಳ ಕೂಗು :
ತಣ್ಣನೆಯ ಗಾಳಿಕುಸ್ನಿಯ ಮೂಗುತುದಿ ತಾಗಿ
ಬಿಗಯುತಿದೆ, ಸೆಡೆಯುತಿದೆ ತೊಗಲು.

ಬಾನಿಗಂಟಿದ ತೊನ್ನುಮೋಡ; ಚಿಕ್ಕೆಯ ಬೊಕ್ಕೆ
ರಸಿಗೆಬೆಳಕನು ಕಿವುಚಿ ಕಮರುತ್ತಿದೆ.
ನೆಲಚಿತೆಯ ಹಸಿ ಸೌದೆಸೌಧದಲಿ ಹತನರತೆ
ಬೆಂಕಿಸೊಂಕಿಗೆ ಕಾದು ಕೊಳೆಯುತ್ತಿದೆ.

ಮನ ಸತ್ತು ಕೊಳೆವ ಮನೆಕೇರಿಗೋರಿಗಳಲ್ಲಿ
ಮುಗ್ಗುವಿಗ್ಗಾಲೊಡಲ ಚೂರುಪಾರು
ಕದವ, ಕಿಂಡಿಯ, ಸೂರ ತೂರಿ ಕುಪ್ಪಳಿಸುತಿವೆ
ಬರಿಹೊಟ್ಟೆ ಚಪ್ಪಟೆಬೆಲೂನು ಸಾಲು.

ಸೇರುತಿದೆ ಊರಾಚೆ ಮಸಣಮಾಳಕ್ಕೆ ಹೊಸ
ಹೊಸ ಪರಿಷೆ, ಸೋಜಿಗದ ವೇಷವರಸೆ :
ರುಂಡಮುಂಡಗಳೆಲುಬುಗೂಡು, ಹುಲಿ ನರಿ ತೋಳ
ಭೂತಭೇತಾಳ ಬೈರೂಪನರತೆ.

ಸರಕು ಹೊಸಹೊಸತು ಮಾರುತ್ತಲಿದೆ; ಕೂಸುಗಳ
ಕಂಕಾಲ, ಕಣ್ಣುಗುಡ್ಡೆಗಳ ಗಾಜು ;
ಕರುಳ ಮಾಲೆಯು, ತೊಗಲ ಚೀಲ, ಅಟ್ಟೆಯ ಬುಟ್ಟಿ,
ಹೃತ್ಪಿಂಡ ಚೆಂಡು, ಬೆನ್ನೆಲುಬುದಾಂಡು.

ತಟ್ಟುತಿದೆ ಮುಷಣದಪಹಾಸ ಕೇರಿಗೆ, ಮನೆಗೆ :
ವಿಜನ ಪಥಪಥ ವಿಕೃತ ಕೇಕೆ, ಕುಣಿತ.
ಕಿರಿದೆಲ್ಲ ಹಲ್ಲ ತಲೆಬುರುಡೆ ಹಾಕಲು ಲಾಗ
ಅಟ್ಟಿ, ಅಡಿಯಿಟ್ಟು ನಡಸಿದೆ ಕವಾತ.

ನಡೆಯುತಿದೆ ರಾತ್ರಿಡಾಕಿನಿಯ ಮೆರವಣಿಗೆ, ಝುಣ-
ಝುಣಿಸಿ ರೂಪಾಯಿಮಳೆ ಬೀಳುತ್ತಿದೆ.
ಲಕ್ಷೋಪಲಕ್ಷ ಕಿಸೆ ಕಿಸಿದು ನಿಂತರು ಬಾಯಿ
ಗುಂಡೋದರಗೆ ಮಾತ್ರ ದಕ್ಕುತ್ತಿದೆ.

# ಇಂದು ನಮ್ಮ ನಾಡು — ೩

ಬೇರು ಸತ್ತೀ ಮರವನೆತ್ತಿ ನಿಲ್ಲಿಸು ಮಗೂ,
ಕೊಂಬೆರೆಂಬೆಗಳಿರಲಿ ಇದ್ದ ಹಾಗೆ;
ಒಣಗಿದೆಲೆಗಳ ತಂದು ಕಾಫಿ ಕಾಯಿಸು, ಕುಡಿ
ತುಂಬಿ ಬರುತಿರೆ ಕಂಠಕಳಲ ಬೇಗೆ.

ತಳಕೆ ಕಟ್ಟೆಯ ಕಟ್ಟಿ ಹಾಕು ನೀರ, ವಿಷಾದ
ತರುಬಿದರೆ ಕುದಿಯೆಸರು ಕಣ್ಣನೀರು
ಸುರಿದು ಬೀಳಲಿ ಇಲ್ಲಿ, ಒಳಗೆ ಬೇಯಲಿ ಅಲ್ಲಿ
ಸೈತಾನನಡುಗೆಗೆ ಚಿರೋಟಿ ಖೀರು.

ಬಲ್ಬುಗಳ ತಂದು ಜೋಡಿಸು, ಬೆಳಕಿನುಯ್ಯಾಲೆ
ಮಳೆಬಿಲ್ಲ ತೂಗಿಬಿಡು ಕೊಂಬೆ ಕೊಂಬೆ;
ಹಚ್ಚು ಕಾಗದದ ಹೂಕುಚ್ಚುಗಳ, ಅತ್ತರನು
ಹಚ್ಚು ಗುಂಜಾರವದ ಹಾಡುಹಾಲಗೆ.

ನೆರಳಿಲ್ಲ, ಕೊಂಬೆ ಬರಿಪೊಳ್ಳು ಎನ್ನಲು ಸಲ್ಲ,
ನೆರಳು ಬೇಕೇ ಹೊನ್ನ ಹೊದಿಕೆಗಿಂತ?
ಇದು ಸನಾತನವೃಕ್ಷವಣ್ಣ; ನೇಣಿಗೆ ಬೇಕೆ
ಬೇರೆ ಆಧಾರ ಈ ಕೊಂಬೆಗಿಂತ?

ಪಡುವಲದ ಗಾಳಿ ಆಡಿದರೆ ತೂಗುವುದಟ್ಟಿ—
ಎಂಥ ಮಾರ್ದವ, ಎಂಥ ನಕಲು ಕುಣಿತ!
ನೆಲದ ಕೊಳೆನೀರಸೊಲ್ಲದು ನಮ್ಮ ದಿವ್ಯತರು,
ಕುಡಿದು ಬೆಳೆವುದು ಸ್ವಪ್ನಲೋಕದಮೃತ!

ಬಾರವೇ ಇಲ್ಲಿಗೊಂದೂ ಹಕ್ಕಿ ?—ಗಿಳಿ ಪುರುಳಿ
ಕೋಗಿಲೆಯು ಗುಬ್ಬಚ್ಚಿ ಕಾಗೆ ಗೂಗೆ ?
ಇರುವ ಕೋಗಿಲೆಯ ಬಡಿ, ಕೊಲ್ಲು ; ಸತ್ತರೆ ಹುಲ್ಲು
ತುರುಕಿ ಇಡು ಸಾಲಾಗಿ ಕೊಂಬೆಮೇಲೆ !

ಹುಳುಕು ತೊಗಟೆಗೆ ಹೊದೆಸು ಅಪರಂಜಿ ತಗಡ ; ಮೈ
ಮೇಲೆ ಕೆತ್ತಿಸು ಇವರ ಪೂರ್ವ ಕಥೆಯ :
" ಇಲ್ಲಿ ನೆರಳಿತ್ತು, ಹಸುರೆಲೆತಳಿರು ಹೂ ಹಣ್ಣು.
ಕೋಗಿಲೆಯ ಸರವಿತ್ತು, ಗಿಳಿಯ ನಿಲಯ !

" ಇಲ್ಲಿ ಮಿಡಿದಿತ್ತು ಕೋದಂಡ, ಮೊಳಗಿತ್ತಿಲ್ಲಿ
ಪಾಂಚಜನ್ಯವು, ಚಕ್ರ ತಿರುಗುತಿತ್ತು ;
ದಂಡವೊ, ಕಮಂಡಲುವೊ, ದರ್ಭಾಸನವೊ. ಪರ್ಣ-
ಶಾಲೆಯೋ ಈ ಇಲ್ಲಿ ಸೊಗಸುತಿತ್ತು."

' ಇತ್ತು 'ಗಳ ಧ್ವಜವ ಹಿಡಿದೆತ್ತಿ ನಿಲ್ಲೋ ಮಗೂ,
' ಇವೆ 'ಯ ಹೃದಯದ್ರಾವ ಬೇಡ ನಿನಗೆ.
ಮರವುಂಟು, ಮರಕೆ ಬಂಗಾರವುಂಟಲ್ಲದೆಯೆ
ಕಟ್ಟೆಯುಂಟಲ್ಲ ! ನೀರಿಕ್ಕು ಅದಕೆ !

# ಮೊದಲ ಚರಣಗಳು

# ಶುದ್ಧಿಪತ್ರ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨೨ | ೫ | ಬೆಳವುದೊಂದೆ | ಬೆಳೆವುದೊಂದೆ |
| ೨೮ | ೨೪ | , | |
| ೩೧ | ೨೦ | ಕಣ್ಣೆ | ಕಣ್ಗೆ |
| ೪೪ | ೧೬ | ಗಂಗಾತರಂಗಮಾಯು | ಗಂಗಾತರಂಗಮಯು |
| ೪೮ | ೯ | ಪಲವೂ | ಸಲವೂ |
| ೫೨ | ೪ | ಕುಪಕುಪಿಮ | ಕುದಿಕುದಿಮ |
| ,, | ೬ | ಜೀವನಾಂಬೋನಿಧಿಯ | ಜೀವನಾಂಭೋನಿಧಿಯ |
| ,, | ೨೨ | ಬಹುಪಂತೆನ್ನ | ಬಹುದೆಂತೆನ್ನ |
| ೫೮ | ೫ | ಹುದಿಗೂಡಿಡುತಿವೆ. | ಹುದಿಗೂಡುತಿವೆ. |
| ೬೪ | ೬ | ಕಗ್ಗಲು | ಕಗ್ಗಲ್ಲು |
| ,, | ೨೦ | ಅಂಬೋಧಗಳ | ಅಂಭೋದಗಳ |
| ೮೦ | ೧೫ | ಲಯವೂ | ಲಯವೊ |
| ,, | ೧೬ | ಕುಣಿವುವೋ | ಕುಣಿವುವೋ |
| ೧೦೨ | ೪ | ಬಿಗಿಯುತಿದೆ | ಬಿಗಿಯುತಿವೆ. |